

# ಅಧ್ಯಯನಾಂಗ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಎಂ.ಫಿಲ್. ಪದವಿಯ ನಿಬಂಧ

## "ಫಕೀರ (ಶ್ರೀಧರ ಬನವಾಸಿ) ರವರ ಸಣ್ಣಕಥೆಗಳು ಒಂದು ಅಧ್ಯಯನ"


ಸಂಶೋಧನಾ ವಿದ್ಯಾರ್ಥಿ:

ನೋಂದಣಿ ಸಂಖ್ಯೆ: 140701030077


2014-2015






# ಅಧ್ಯಯನಾಂಗ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

**ಎಂ.ಫಿಲ್. ಪದವಿಯ ನಿಬಂಧ**

# "ಫಕೀರ (ಶ್ರೀಧರ ಬನವಾಸಿ) ರವರ ಸಣ್ಣಕಥೆಗಳು ಒಂದು ಅಧ್ಯಯನ"

ವಿದ್ಯಾರ್ಥಿ ಹೆಸರು
ಅರ್ಪಿತಾ ಎಂ. ಎಸ್

ಮಾರ್ಗದರ್ಶಕರು.
ಡಾ. ಎಸ್. ಶಾಂಭವಿ.

**ಸಂಶೋಧನಾ ವಿದ್ಯಾರ್ಥಿ:**

ನೋಂದಣಿ ಸಂಖ್ಯೆ: 140701030077

2014-2015

# ಪರಿವಿಡಿ

# ಅಧ್ಯಾಯ : ೧

## ಪೀಠಿಕೆ, ಉದ್ದೇಶ ಮತ್ತು ವ್ಯಾಪ್ತಿ:

'ಫಕೀರ' ಎಂಬ ಅಂಕಿತ ನಾಮದ ಶ್ರೀಧರ ಬನವಾಸಿ ಹೊಸ ಚಿಂತನೆಯ ಬರಹಗಾರರು. ವಸುಧೇಂದ್ರ, ಜಯಂತ್‌ಕಾಯ್ಕಿಣಿ, ನೇಮಿಚಂದ್ರ, ವೈದೇಹಿ, ಸುನಂದಾ ಬೆಳಗಾಂವಕರ್ ಮುಂತಾದ ಹೊಸ ಪೀಳಗೆಯ ಕಥೆಗಾರರ ಸಾಲಿನಲ್ಲಿ ಗುರುತಿಸಿಕೊಳ್ಳುವಂತಹ ಹೆಸರು.

ಹೊಸ ತಲೆಮಾರಿನ ಬರಹಗಾರರೊಬ್ಬರನ್ನು ಗುರುತಿಸಿ ವಿನೂತನ ರೀತಿಯ ಬರವಣಿಗೆಯನ್ನು ನನ್ನ ಪ್ರಬಂಧದ ವಿಷಯವಾಗಿ ಆರಿಸಿಕೊಳ್ಳುವ ಉದ್ದೇಶದಿಂದ ಶ್ರೀಧರ ಬನವಾಸಿ (ಫಕೀರ) ಅವರ ಅಮ್ಮನ ಆಟೋಗ್ರಾಫ್, ದೇವರ ಜೋಳಿಗೆ ಎಂಬ ಕಥಾ ಕೃತಿಬಂಧಗಳನ್ನು ನನ್ನ ಎಂ.ಫಿಲ್. ಪದವಿ ಅಧ್ಯಯನಕ್ಕೆ ಆರಿಸಿಕೊಂಡಿರುತ್ತೇನೆ.

ಫಕೀರ ಅವರು ಈ ಇಂದಿನ ಕಥಾಸಾಹಿತ್ಯದಲ್ಲಿ ಗುರುತಿಸಿಕೊಳ್ಳುವಂತಹ ಭರವಸೆಯ ಕಥೆಗಾರರು. ನೋಟ ಮಾತ್ರದಲ್ಲೆ ಹಿಡಿತಕ್ಕೆ ಸಿಗುವಂತಹ ನಮ್ಮನ್ನು ಒಳಗೊಳ್ಳುವ ಅನುಭವ ಕೇಂದ್ರಿತ ಕಥೆಗಳು ಓದುಗರನ್ನು ಸೆಳೆಯುತ್ತವೆ.

ಹೊಸಪೀಳಗೆಯ ಬರಹಗಾರರಲ್ಲಿ, ಓದುಗರಲ್ಲಿ ಸಂಚಲನ ತರುವಂತಹ ಬರೆಯುವ ಶಕ್ತಿ ಇವರಲ್ಲಿ ಗುರುತಿಸಿದ್ದೇನೆ. ಅದು ಅವರ ವಸ್ತು, ಅನುಭವ, ನಿರೂಪಣೆ ಶೈಲಿ, ಬರೆಯುವ ಪ್ರಯತ್ನ ವಿಶೇಷವಾಗಿದೆ. ಸಂವೇದನಾತ್ಮಕ ಬರಹ ಕಲ್ಪಕಶಕ್ತಿ ಪರಿಣಾಮಕಾರಿಯಾಗಿ ನಿರ್ಮಿತವಾಗುತ್ತದೆ. ಅವರ ಅನುಭವದ ವಿಸ್ತಾರದಿಂದ ಹಿಡಿದು ಅವರ ವಿವಿಧ ಕ್ಷೇತ್ರಗಳು ಅವರ ಕಥೆಗಳಲ್ಲಿ ಅವ್ಯಾಹತವಾಗಿ ಅವರನ್ನು ಕಾಡಿದ ಉತ್ತರ ಕರ್ನಾಟಕದ ಬನವಾಸಿ. ಅಂತಹ ಪುಟ್ಟ ಊರಿನಿಂದ ಬಂದಿದ್ದು, ಅಮೆರಿಕದವರೆಗಿನ ಭೌಗೋಳಿಕ ಹಾಗೂ ಚಿಂತನಾ ಶಿಸ್ತುಗಳನ್ನು ಇವರ ಕಥೆಗಳಲ್ಲಿ ವಿಶಿಷ್ಟವಾಗಿ ಗುರುತಿಸಬಹುದು.

ಕೆಂಬಳ್ಳಿಯಿಂದ ಹಿಡಿದು ಅಮೆರಿಕಾದವರೆಗೂ ನೋಡಿಬಂದ ಅಂತಹ ಮೂಲಬೇರುಗಳ ಕಥೆಗಳನ್ನು ತಡಕಾಡಿವೆ. ಮುಖ್ಯವಾಗಿ ನಾನು ಅವರ ಅನುಭವ ವಿಸ್ತರಣ ಅಥವಾ ಅನುಭವ ಪೂರಿತವಾದ ಮಾನವ ಸಹಜ ಸಂಬಂಧಗಳ ತೊಡರುಗಳನ್ನು ಬಿಡಿಸುವಂತಹ ಕಥೆಗಳನ್ನು ಸಮಾಜವಾದದ ನೆಲೆಯಲ್ಲಿ ಸೋಲು, ದೌರ್ಬಲ್ಯ, ಹತಾಶೆ, ಕ್ರೌರ್ಯ ಈ ಭಾವನೆಗಳಿಂದ ಮನಸ್ಸು ಮುಕ್ತವಾಗಬಹುದು.

ಕೃತಕ ಹಾಗೂ ಸರಳ ಸಂಬಂಧಾತ್ಮಕ ಭಾವನೆಗಳ ಶೋಧನೆ ಯಾರು ಶೋಧಿಸಿದ ಅನುಭವದ ಆಯಾಮಗಳು ಇವರ ಕಥೆಗಳಲ್ಲಿ ಸಾಂದ್ರವಾಗಿ ಮೂಡಿಬಂದಿದೆ. ನೋಡುವುದಕ್ಕೆ ನಮ್ಮ ಜೀವನದ ಚಿತ್ರ ಪುಟಗಳನ್ನೆ ತೆರೆದು ಹಿಡಿಯುತ್ತಿರುವ ಬರವಣಿಗೆ ಎಂದೆನಿಸಿದ್ದಾರೆ. ಹೀಗೆ ಮಾನವ ಸಹಜ ಸಂಬಂಧಗಳ ತೊಡರುಗಳನ್ನು ಬಿಡಿಸುವಂತಹ ಕಥೆಗಳನ್ನು ಸಮಾಜವಾದದ ನೆಲೆಯಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದಾರೆ.

ಜಾಗತೀಕರಣದ ಪ್ರಭಾವದಿಂದ ರೂಪಿತವಾದ ಕಥೆಗಳೇ ಬಹಳಷ್ಟಿದ್ದು, ಆ ನಿಟ್ಟಿನಲ್ಲಿ ಮುಖ್ಯವಾಗಿ ನನ್ನ ಪ್ರಬಂಧದಲ್ಲಿ ಚರ್ಚಿಸುವ ಉದ್ದೇಶವಿದೆ. ಫಕೀರರ ಕಥೆಗಳಲ್ಲಿ ಸಮಾಜವಾದಿ ನೆಲೆಯಲ್ಲಿ ಕಾಣಸಿಗುವ ಕಥೆಗಳನ್ನು ಗುರುತಿಸುತ್ತೇನೆ ಹಾಗೂ ಅವರ ಕಥೆಗಳಲ್ಲಿ ಕಾಣುವ ಭೌಗೋಳಿಕತೆಯ ಅನುಭವ ವಿಸ್ತಾರದ ನನ್ನ ಅಧ್ಯಯನದಲ್ಲಿ ಗುರುತಿಸುವ ಉದ್ದೇಶವಿದೆ.

ಅವರ ಒಟ್ಟಾರೆ, ಕಥೆಗಳನ್ನು ನೋಡಿದಾಗ ಅವುಗಳ ಬೆಳವಣಿಗೆಯ ವಿಶೇಷತೆಯು ನನ್ನ ಗಮನಕ್ಕೆ ಬಂದಿದ್ದು, ಅಂತಹ ಅಂಶಗಳನ್ನು ಒಂದೆಡೆ ಚರ್ಚಿಸುವ ಪ್ರಯತ್ನ ಮಾಡುತ್ತೇನೆ. ಫಕೀರರು ಬನವಾಸಿ ಸುತ್ತಲ ಗ್ರಾಮೀಣ ಪರಿಸರದಿಂದ ಬಂದವರಾದ್ದರಿಂದ ಅವರ ಕೆಲವು ಪಾತ್ರಗಳ ಸಂಭಾಷಣೆ, ಸ್ವಗತ, ಬಯ್ಗಳಗಳಲ್ಲಿ ಅಲ್ಲಿಯ ಭಾಷಾ ಜಾಡು ಇರುವುದನ್ನು ಗುರುತಿಸಿದ್ದೇನೆ. ಜೊತೆಗೆ ದುಬೈ, ಮುಂಬೈ, ಪೂಣೆ ಮುಂತಾದ ಪ್ರದೇಶಗಳಲ್ಲಿ ಇವರ ಕಥಾ ಪಾತ್ರಗಳು ಕಾಣಿಸಿಕೊಂಡು ನಗರೀಕರಣದ ವಿಶೇಷತೆಗಳು ಹಲವು ಕತೆಗಳಲ್ಲಿ ಮೂಡಿವೆ.

ಒಟ್ಟಾರೆಯಾಗಿ ವಸ್ತುವೈವಿಧ್ಯ, ಮಾನವೀಯ ಸಂಬಂಧಗಳ ಒಳತುಡಿತಗಳು, ನನ್ನ ಓದಿನಲ್ಲಿ ಗುರುತಿಸಿ ಈ ಹೊತ್ತಿನ ಕಥೆಗಾರರ ಸಾಲಿನಲ್ಲಿ ಗುರುತಿಸಿಕೊಳ್ಳುವ ಕಥೆಗಳಾಗಿ ಹೇಗೆ ಮಹತ್ವ ಪಡೆದಿವೆ ಎಂಬುದನ್ನು ನನ್ನ ಪ್ರಬಂಧದ ಅಧ್ಯಯನದಲ್ಲಿ ಗುರುತಿಸುತ್ತೇನೆ.

# ಅಧ್ಯಾಯ : ೨

## ಇಂದಿನ ಕಥಾ ಸಾಹಿತ್ಯದ ಪರಿಚಯ:

20ನೇ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸಣ್ಣಕಥೆ ಪ್ರಕಾರಕ್ಕೆ ಒಂದು ವಿಶಿಷ್ಟ ಪರಂಪರೆ ಇದೆ. ಈ ಸಾಹಿತ್ಯವು ವೈವಿಧ್ಯತೆಯಿಂದ ಓದುಗರ ಮನ ಸೆಳೆಯುತ್ತಿದೆ. ಕಥೆ ಬದುಕಿನ ಒಡನಾಡಿ ಎನಿಸಿದೆ. ಒಡನಾಡಿ ಎನಿಸಿದ ಪ್ರಕಾರ ತುಂಬ ಹಿಂದಿನಿಂದಲೂ ಕಥೆ ಒಂದು ಕಲಾಪ್ರಕಾರವಾಗಿ ತನ್ನ ಉದ್ದೇಶ ಮತ್ತು ಅಗತ್ಯವಾದ ರಂಜನೆಯನ್ನು ನೀಡುತ್ತಲೇ ಬಂದಿದೆ.

ಸಣ್ಣಕಥೆ ವಿಶಿಷ್ಟ ಸಾಹಿತ್ಯ ಪ್ರಕಾರವಾಗಿ ಕನ್ನಡದಲ್ಲಿ ಮೂಡಿಬಂದಿದ್ದು, ಪಾಶ್ಚಾತ್ಯ ಸಾಹಿತ್ಯ ಪ್ರಭಾವದಿಂದ ಎನ್ನಬೇಕು. ಸಣ್ಣಕಥೆಯ ಚರಿತ್ರೆಯು ಕಾದಂಬರಿಯ ಚರಿತ್ರೆಯನ್ನು ಹೋಲುತ್ತದೆ. ಪಾತ್ರ, ವಸ್ತು, ಸಂಭಾಷಣೆ, ನಿರೂಪಣೆ, ದೃಷ್ಟಿಕೋನ, ಜೀವನ ಸೃಷ್ಟಿ, ಇತ್ಯಾದಿ ಮೂಲ ಘಟಕಗಳು ಎರಡರಲ್ಲೂ ಇರುತ್ತವೆ. ಆದರೆ, ಎರಡೂ ಒಂದೇ ಅಲ್ಲ.

[1]"ಸಣ್ಣಕಥೆ ಕಾದಂಬರಿಯ ಸಂಕ್ಷಿಪ್ತ ರೂಪವಲ್ಲ" ಎಂದು ಮಾರ್ಕ್‌ಶೋರರ್ ಹೇಳಿದ್ದಾರೆ.

ಕನ್ನಡ ಕಥಾಸಾಹಿತ್ಯದ ಮುಖ್ಯ ಕೇಂದ್ರಬಿಂದು ಸಾಮಾನ್ಯ ಮನುಷ್ಯ, ಜನಪದ ಸಮುದಾಯ ಕಟ್ಟಿ ಆಡಿರುವ ಗೀತೆಗಳು, ಕಥೆಗಳು, ಜಗತ್ತಿನ ಎಲ್ಲಾ ಭಾಷೆಗಳಲ್ಲೂ ಸಾಕಷ್ಟು ದೊರೆಯುತ್ತವೆ. ಆದರೆ, ತಾರ್ಕಿಕವಾಗಿ ಆಲೋಚಿಸಿದರೆ, ಅವು ಸಣ್ಣಕಥೆಗಳಿಗಿಂತ ಮನುಷ್ಯ ಕೇಂದ್ರಿತ ನೆಲೆಯುಳ್ಳವು. ಒಂದು ಬಗೆಯ ಭ್ರಮಾತ್ಮಕ ಕಥಾ ಕಲ್ಪನೆಯುಳ್ಳವು.

1900ರಲ್ಲಿ ಪ್ರಕಟವಾದ ಪಂಜೆಮಂಗೇಶರಾಯರ 'ನನ್ನ ಚಿಕ್ಕಕಥೆ'ಯೇ ಕನ್ನಡದ ಮೊದಲ ಸಣ್ಣಕಥೆ. ಕನ್ನಡದ ಮೊದಲ ಸಣ್ಣಕಥೆ ಪಂಜೆಯವರ ಕಥೆಗಳು, ನವೋದಯ ಕಾಲದ ಆರಂಭಿಕ ವಿಷಯಗಳಾಗಿವೆ. ಮಾಸ್ತಿ, ಕುವೆಂಪು, ಗೊರೂರು, ನವೋದಯ ಸಂದರ್ಭದಲ್ಲಿ ಬಂದಂತಹ ಪ್ರಮುಖ ಬರಹಗಾರರಾಗಿದ್ದಾರೆ. ನವೋದಯ ಕಾಲದಲ್ಲಿ ಸಾಮಾಜಿಕ ಅಧ್ಯಯನವನ್ನು ಕಥನಕಾರರು ಚಿತ್ರಿಸಿದ್ದಾರೆ.

ನವೋದಯ ಸಣ್ಣಕಥೆಗಳು ಸ್ವರೂಪದಲ್ಲಿ ಅದರದ್ದೇ ಆದ ವಿಶಿಷ್ಟತೆಯನ್ನು ಹೊಂದಿವೆ. ಕನ್ನಡ ಸಾಹಿತ್ಯದಲ್ಲಿ 'ಕಥೆ' ಎಂಬುದು ಸಣ್ಣ ಸ್ವರೂಪದಲ್ಲಿ ಹಾಗೂ ಅಲ್ಲಲ್ಲಿ ದೊಡ್ಡ ಸ್ವರೂಪದಲ್ಲಿ ತನ್ನ ಸ್ವಂತಿಕೆಯನ್ನು ಮೆರೆದು ಒಂದು ಕಲಾತ್ಮಕ ಪ್ರಕಾರವಾಗಿ ಸ್ಥಾನ ಪಡೆದಿದ್ದರೂ, 'ಸಣ್ಣಕಥೆ' (Short story) ಮಾತ್ರ ತೀರಾ ಇತ್ತೀಚಿನದು. ಅದುವರಿಗೂ 'ಕಥೆ' ಅಥವಾ 'ಕತೆ' ಎಂದೇ ಗುರುತಿಸಲ್ಪಡುತ್ತಿದ್ದ ತೀರಾ 'ಸಣ್ಣಕಥೆ'ಯು ಎಂದು ಕತೆಯೆನಿಸಿಕೊಂಡಿರುವುದನ್ನು ಗಮನಿಸುವುದು ಸೂಕ್ತ. ಬಿ.ವೆಂಕಟಾಚಾರ್ಯರು ತಾವು ಅನುವಾದಿಸುತ್ತಿದ್ದ ಕಥೆಗಳನ್ನು 'ಚಿಕ್ಕ ಕಥೆ' ಎಂದು ಕರೆದು ಅದಕ್ಕೆ ಒಂದು ಅಧಿಕೃತ ಸ್ಥಾನ

ಕಲ್ಪಿಸಿದವರು. 'ಮಾಸ್ತಿ ವೆಂಕಟೇಶ್ ಅಯ್ಯಂಗಾರ್' ಅದಕ್ಕೆ ಇವರನ್ನು 'ಸಣ್ಣಕತೆಯ ಜನಕ' ಎಂದೇ ಕರೆಯುತ್ತಾರೆ.

ಬಹುಶಃ ಸಣ್ಣಕಥೆಯ ಮೂಲವನ್ನು ಮೌಖಿಕ ಪರಂಪರೆಯಲ್ಲಿ (Oral Tradition) ಹುಡುಕಬಹುದು. ಎನ್ನಿಸುತ್ತವೆ. ಜನಪದ ಸಮುದಾಯ ಕಟ್ಟಿಹಾಡಿರುವ ಗೀತೆಗಳು ಕಥೆಗಳು ಜಗತ್ತಿನ ಎಲ್ಲಾ ಭಾಷೆಗಳಲ್ಲೂ ಸಾಕಷ್ಟು ದೊರೆಯುತ್ತವೆ. ಹೊಸಗನ್ನಡ ಸಾಹಿತ್ಯ ರೂಪಗಳಲ್ಲಿ ಸಣ್ಣಕಥೆಗೆ ಮಹತ್ವದ ಸ್ಥಾನವಿದೆ. ಆಬಾಲವೃದ್ಧರ ಮನಸ್ಸನ್ನು ಸೂರೆಗೊಳ್ಳುವ ಆಕರ್ಷಕ ಶಕ್ತಿಯನ್ನು ಸಣ್ಣಕಥೆ ಒಳಗೊಂಡಿದೆ. 'ಪದ್ಯಂ ವದ್ಯಂ ಗದ್ಯಂ ಹೃದ್ಯಂ' ಎಂಬ ಮನೋರಮೆಯ ಮಾತಿನಂತೆ ಸರಳ ಸುಂದರ ಗದ್ಯಶೈಲಿಯಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಸಣ್ಣಕಥೆಗಳು ಸಮಾಜದ ವಾಸ್ತವ ಬದುಕಿನ ವಿವಿಧ ಚಿತ್ರಣಗಳನ್ನು ನೀಡುವಲ್ಲಿ ಯಶಸ್ವಿಯಾಗಿದೆ.

ಭಾರತೀಯರು ಪ್ರಾಚೀನ ಕಾಲದಿಂದಲೂ ಕಥನ ಸಾಹಿತ್ಯಕ್ಕೆ ಪ್ರಾಶಸ್ತ್ಯ ನೀಡಿದ್ದು, ವೇದ ಉಪನಿಷತ್ತುಗಳಲ್ಲಿ ಬರುವ ಕಥೆಗಳು, ಪಂಚತಂತ್ರ, ಹಿತೋಪದೇಶದಂಥ ನೀತಿ ಕಥೆಗಳು ಜೈನ ಕಥಾ ಸಾಹಿತ್ಯ, ಶಿವಕೋಟ್ಯಾಚಾರ್ಯರ ವಡ್ಡಾರಾಧನೆ ಮತ್ತು ಜಾನಪದ ಕಥೆಗಳು ಇದಕ್ಕೆ ನಿದರ್ಶನಗಳಾಗಿವೆ. [2]"ನಮ್ಮ ಜಾನಪದ ಪರಂಪರೆಯಲ್ಲಿ ಕತೆಯ ಸಾಹಿತ್ಯ ರಾಶಿರಾಶಿಯಾಗಿ ಸಿಕ್ಕುವುದು ಅಜ್ಜಿ ಹೇಳುವ ಕಥೆಗಳವರೆಗೆ ಕಥಾ ಜಾತಿಯ ವಿವಿಧ ಸ್ವರೂಪಗಳು ಅದರಲ್ಲಿ ನೋಡಲು ದೊರೆಯುವುವು. ವ್ಯಕ್ತಿ-ವ್ಯಕ್ತಿಗಳ ಸ್ವಭಾವಗಳನ್ನು ಸಾಮಾನ್ಯ ಸಮಾಜ ಜೀವನವನ್ನು ಅಣಕಿಸಿ ತೋರಿಸುವ ಚುಟುಕು ಕಥೆಗಳಿರುವುವು, ತ್ಯಾಗವೀರರು, ಧರ್ಮವೀರರನ್ನು ಯುದ್ಧವೀರರನ್ನು ಬಣ್ಣಿಸಿದ ಪವಾಡ ಕಥೆಗಳಿರುವುವು. ಶೃಂಗಾರ ಸರಸಿಗಳಾದ ರಾಜ-ರಾಣಿಯರ ಸರಸ-ರಂಜಕ ಕಥೆಗಳೂ ಇರುವುವು. ಇವುಗಳಲ್ಲಿಯ ಹಲವು ಕಥೆಗಳೂ, ಅರಳಿಕೆಯಲ್ಲಿ ಅಲ್ಲದೇ ಹೋದರೂ, ಮೂಲ ಸ್ವರೂಪದಲ್ಲಿ ಆಧುನಿಕ ಸಣ್ಣಕಥೆಗಳ ತಂತ್ರಕ್ಕೆ ಹೊಂದುವಂಹವೇ ಇರುತ್ತವೆ' ಎಂದು ಜಿ.ಎಸ್.ಆಮೂರರು ಹೇಳಿದ್ದಾರೆ. 1900 ರಿಂದ 1920ರವರೆಗಿನ ಕಾಲವನ್ನು ಆಧುನಿಕ ಕನ್ನಡ ಸಣ್ಣಕಥೆಯ ಪ್ರಾರಂಭದ ಕಾಲವೆಂದು ಕರೆಯುಲಾಗುತ್ತಿದ್ದು, 20ನೇ ಶತಮಾನವನ್ನು 'ಸಣ್ಣಕಥೆಗಳ ಯುಗ' ಎನ್ನಲಾಗಿದೆ.

ಕಥೆಯ ಚಲನೆ ಸಹಜವಾಗಿರಬೇಕು, ವಸ್ತು ಹಳೆಯದಾದರೂ ಅದನ್ನು ಹೇಳುವ ರೀತಿಯಲ್ಲಿ ಸೊಗಸಿರಬೇಕು. ಕಥೆ ನಿರಂತರವಾಗಿ, ನೇರವಾಗಿ ಸಾಗುವಂತೆ ಹೇಳಬೇಕು. ಕಥೆಯ ಓಟಕ್ಕೆ, ಬೆಳವಣಿಗೆಗೆ ಅಡ್ಡಿಯಾಗುವ ಅಂಶ ಅಲ್ಲಿರಬಾರದು ಎನ್ನುವ ಮಾತಿಗೆ ಮಾಸ್ತೀರವರು ಅತ್ಯುತ್ತಮ ಮಾದರಿಯಾಗಿದ್ದಾರೆ.

ನವೋದಯ ಬರಹಗಾರರಲ್ಲಿ ನಿರೂಪಣೆ, ತಮಾಷೆ, ವರ್ಣನೆ, ವಿಶ್ಲೇಷಣೆ, ರಸಿಕತೆ, ದರ್ಶನ ಈ ಎಲ್ಲಾ ಗುಣಗಳನ್ನು ಕಥೆಗಳಲ್ಲಿ ಕಾಣಬಹುದಾಗಿದೆ.

ನವೋದಯದ ವಿರುದ್ಧ ಅಸಹನೆ ಹಾಗೂ ಪ್ರತಿರೋಧವನ್ನು ತೆಗೆಯಲು ಹುಟ್ಟಿಕೊಂಡ ಪ್ರಕಾರ ಪ್ರಗತಿಶೀಲ. ಇವರು ಕನ್ನಡ ಕಥಾಸಾಹಿತ್ಯದ ನೆಲೆಗಳನ್ನು ಮತ್ತಷ್ಟು ವಿಸ್ತರಿಸಿದ್ದಾರೆ. ಈ ಕಾಲದ ಪ್ರಮುಖ ಕತೆಗಾರರೆಂದರೆ, ಅ.ನ.ಕೃ, ಅವರ ಮುಂದಾಳತ್ವದಲ್ಲಿ ಪ್ರಗತಿಶೀಲ ಸಾಹಿತ್ಯ ಮುಂದಾಯಿತು. ನಿರಂಜನ, ಚದುರಂಗ, ತ್ರಿವೇಣಿ ಮುಂತಾದ ಪ್ರಮುಖ ಬರಹಗಾರರು ತಮ್ಮ ಕೊಡುಗೆ ನೀಡಿದರು. ಆದರೆ ನವೋದಯ ಕಥಾಸಾಹಿತ್ಯದಲ್ಲಿ ಪ್ರಕಟಣೆ ಉತ್ಕೃಷ್ಟ ಮಾದರಿಯ ಕಥಾಸಾಹಿತ್ಯ ಪ್ರಗತಿಶೀಲ ಕಾಲದಲ್ಲಿ ಮೂಡಿಬರಲಿಲ್ಲವೆಂದೇ ಹೇಳಬಹುದಾಗಿದೆ.

ಆನಂತರದಲ್ಲಿ ಹುಟ್ಟಿಕೊಂಡ ನವ್ಯಸಾಹಿತ್ಯದ ಸಂದರ್ಭದಲ್ಲಿ ಸಣ್ಣ ಕಥಾಸಾಹಿತ್ಯ ಸಮೃದ್ಧವಾಗಿ ಬೆಳೆಯಿತೆಂದು ಹೇಳಬಹುದು. ನವ್ಯಕಥೆಗಳ ಒಂದು ಯಶಸ್ವಿ ಗುಣವೆಂದರೆ, ಭಾಷೆ ಮತ್ತು ಅವುಗಳ ರಚನೆಯ ವಿಧಾನ. ನವ್ಯ ಕಥೆಗಾರರಿಗೆ ಭಾಷೆ ಬೇರೆ ಅಲ್ಲ, ಸಾಹಿತ್ಯ ಬೇರೆ ಅಲ್ಲ. ಭಾಷೆಯು ಒಂದು ಸಾಮಾಜಿಕ ಸೃಷ್ಟಿ ಎಂದು ಬಲವಾಗಿ ನಂಬಿದ್ದವರು ನವ್ಯರು. ಜೊತೆಗೆ ಭಿನ್ನ ಮಾದರಿಯನ್ನು, ವೈವಿಧ್ಯತೆಯನ್ನು ತಂದುಕೊಟ್ಟರು. ಅನಂತಮೂರ್ತಿ, ಚಿತ್ತಾಲ, ಲಂಕೇಶ್, ತೇಜಸ್ವಿ, ವೀಣಾಶಾಂತೇಶ್ವರ್ ಮುಂತಾದವರು ಈ ಕಾಲದಲ್ಲಿ ತಮ್ಮದೇ ಆದ ವಿಧಾನದಲ್ಲಿ ಕಥಾಸಾಹಿತ್ಯವನ್ನು ಬೆಳೆಸಿದರು.

ಮುಂದೆ ದೇವನೂರು ಮಹದೇವ ಅವರ ದಲಿತಸಾಹಿತ್ಯ ಸೃಷ್ಟಿಯ ಆದ್ಯಮಾರ್ಗವನ್ನು ಹಿಡಿದರು. ಅವರ ಕಥೆಗಳು ದಲಿತ ಜಗತ್ತಿನ ನೋವು-ಯಾತನೆ, ಅವಮಾನ, ಅಸಹಾಯಕತೆ, ಹಸಿವು ಹಾಗೂ ಸಾಮಾಜಿಕ-ಆರ್ಥಿಕವಾದ ಅಸಮಾನತೆಯ ವಿರೋಧಾಭಾಸಗಳನ್ನು ವಿವರಿಸುತ್ತದೆ. ಕುಂ.ವೀರಭದ್ರಪ್ಪ, ಕಾಳೇಗೌಡ ನಾಗವಾರ, ಬರಗೂರು ರಾಮಚಂದ್ರಪ್ಪ, ಗೀತಾನಾಗಭೂಷಣ್, ಸಾರಾ ಅಬೂಬಕರ್, ಮೊಗಳ್ಳಿ ಗಣೇಶ್, ಅರವಿಂದ್ ಮಾಲಗತ್ತಿ ಮುಂತಾದ ಅನೇಕ ಕಥೆಗಾರರು ದಲಿತ ಬಂಡಾಯ ಕಥಾ ಸಾಹಿತ್ಯದ ಬೆಳವಣಿಗೆಗೆ ಕಾರಣರಾಗಿದ್ದಾರೆ. ಇದೇ ಸಂದರ್ಭದಲ್ಲಿ ಮೂಲನವ್ಯದ ವಿಸ್ತರಣೆಯ ಪ್ರಯೋಗಶೀಲ ನವ್ಯಕಥೆಗಾರರೆಂದು ಕರೆಯಬಹುದಾದ ಕಥೆಗಾರರು ಕಥೆಗಳನ್ನು ಸೃಷ್ಟಿಸಿದ್ದಾರೆ. ಇಂತಹವರಲ್ಲಿ ಮುಖ್ಯರಾದವರು ಜಯಂತ್ ಕಾಯ್ಕಿಣಿ, ವಿವೇಕ್ ಶ್ಯಾನುಭೋಗ, ನಾಗವೇಣಿ, ಮಿತ್ರವೆಂಕಟ್ರಾಜ್, ವೈದೇಹಿ, ಕುಸುಮ, ಅಮರೇಶ್ ನುಡುಗೋಣಿ, ನೇಮಿಚಂದ್ರ ಮುಂತಾದ ಕಥೆಗಾರರನ್ನು ಹೆಸರಿಸಬಹುದಾಗಿದೆ.

ಕಥೆ ಎಂದರೆ ಮೊದಲಿನಿಂದ ಎಲ್ಲರಿಗೂ ಬಹಳ ಇಷ್ಟ, ಈ ಕಾರಣದಿಂದಾಗಿ ಈ ಪ್ರಕಾರವು ಹೆಚ್ಚು ವ್ಯಾಪಕವಾಗಿ ಬೆಳೆದಿದೆ. ಸಣ್ಣಕಥೆಯಲ್ಲಿ ನೀಳ್ಗತೆ, ಸಣ್ಣಕಥೆ, ಕಿರುಗತೆ ಎಂದು ವಿಭಜನೆಯನ್ನು ಮಾಡಿಕೊಳ್ಳಬಹುದಾಗಿದೆ.

<u>ಅಡಿ ಟಿಪ್ಪಣಿಗಳು:</u>

1. ಕಥೆ-ಕಥನ: ಡಾ॥ ಎಸ್.ಪ್ರಸಾದಸ್ವಾಮಿ, ಪುಟ-1
2. ಕನ್ನಡ ಕಥನ ಸಾಹಿತ್ಯ-ಸಣ್ಣಕಥೆ: ಜಿ.ಎಸ್.ಆಮೂರ್, ಪುಟ-9

# ಅಧ್ಯಾಯ : ೩

## ಫಕೀರ ಅವರ ಬದುಕು ಹಾಗೂ ಸಾಹಿತ್ಯ:

'ಫಕೀರ' ಎಂಬ ಅಂಕಿತನಾಮದಿಂದ ಸಾಹಿತ್ಯ ರಚನೆಯಲ್ಲಿ ಕನ್ನಡ ತೊಡಗಿರುವ ಶ್ರೀಧರ ಬನವಾಸಿ ಅವರು ಮೂಲತಃ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ಬನವಾಸಿಯವರು. 1985ರಲ್ಲಿ ಜನನ. ಬನವಾಸಿ ಉಜಿರೆ ಹಾಗೂ ದಾವಣಗೆರೆಯಲ್ಲಿ ಶಿಕ್ಷಣಾಭ್ಯಾಸ ಮಾಡಿರುವ ಇವರು, ಮೆಕ್ಯಾನಿಕಲ್ ಎಂಜಿನಿಯರಿಂಗ್ ಪದವೀಧರ, ಜೊತೆಗೆ ಜರ್ನಲಿಸಂ ಅಂಡ್ ಮಾಸ್ ಕಮ್ಯುನಿಕೇಷನ್‌ನಲ್ಲಿ ಡಿಪ್ಲೋಮಾ ಮಾಡಿದ್ದಾರೆ. ಹೈಸ್ಕೂಲ್‌ನಲ್ಲಿರುವಾಗಲೇ ಕವನಗಳನ್ನು ಬರೆಯುತ್ತಾ ಸಾಹಿತ್ಯಿಕ ಚಟುವಟಿಕೆಯನ್ನು ಪ್ರಾರಂಭಿಸಿದ ಶ್ರೀಧರ್ ಕಾಲೇಜು ದಿನಗಳಲ್ಲಿ ಇವುಗಳ ಆಸಕ್ತಿ ಹೆಚ್ಚಾಗಿ, ಮತ್ತಷ್ಟು ಬರವಣಿಗೆ, ಕವನ, ಲೇಖನಗಳಲ್ಲಿ ಬರೆಯಲಿಕ್ಕೆ ಪ್ರಾರಂಭಿಸಿದರು. ಅಂದಿನಿಂದ ಇಂದಿನವರೆಗೆ ಬೇರೆಬೇರೆ ವಿಷಯಕ್ಕೆ ಸಂಬಂಧಿಸಲ್ಪಟ್ಟ ಇವರ ನೂರಾರು ಲೇಖನಗಳು ಸಂದರ್ಶನಗಳು ಚಿಂತನ ಬರಹಗಳು ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ.

ಮುದ್ರಣ ಹಾಗೂ ಎಲೆಕ್ಟ್ರಾನಿಕ್ ಮಾಧ್ಯಮ ಮನರಂಜನೆಯಲ್ಲಿ ಕಳೆದ ಆರು ವರ್ಷಗಳಿಂದ ತೊಡಗಿಸಿಕೊಂಡಿದ್ದಾರೆ. ಉಪಸಂಪಾದಕನಾಗಿ 'ಕೇಬಲ್‌ವಾರ್ತೆ', 'ಚಿತ್ತಾರೆ' ಪತ್ರಿಕೆಗಳಿಗೆ ಕೆಲಸ ಮಾಡಿದ್ದಾರೆ. ಸೀರಿಯಲ್‌ಗಳು ಜೊತೆಗೆ ಮುನ್ನೂರಕ್ಕೂ ಹೆಚ್ಚಿನ ನಾನ್‌ಫಿಕ್ಷನ್ ಕಾರ್ಯಕ್ರಮಗಳ ಎಪಿಸೋಡ್ ಸ್ಕ್ರಿಪ್ಟ್ ಬರೆದಿದ್ದಾರೆ. ಕೆಲವು ಟೀವಿ ಕಾರ್ಯಕ್ರಮಗಳು ಸಾಕ್ಷ್ಯಚಿತ್ರಗಳನ್ನು ನಿರ್ದೇಶನ ಮಾಡಿದ್ದಾರೆ. 'ಫಕೀರನ ಕನಸುಗಳು' ಅನ್ನುವುದು ಇವರ ಬ್ಲಾಗ್‌ನ ಹೆಸರು. ತನ್ನ ಬ್ಲಾಗ್‌ಗೆ ಬರೆಯುವುದು ಅವರ ಪ್ರಮುಖ ಹವ್ಯಾಸ ಮೂಲತಃ ಎಂಜಿನಿಯರಿಂಗ್ ಓದಿದವರಾಗಿದ್ದರಿಂದ ಕೇಬಲ್ ಹಾಗೂ ಬ್ರಾಡ್ ಕ್ಯಾಸ್ಟಿಂಗ್ ತಂತ್ರಜ್ಞಾನದ ಬಗ್ಗೆ ವಿಶೇಷ ಆಸಕ್ತಿ. ಈ ಉದ್ಯಮದ ತಾಂತ್ರಿಕ ವಿಷಯಗಳಿಗೆ ಸಂಬಂಧಿಸಿದಂತೆ ಲೇಖನಗಳನ್ನು ಕೂಡ ಬರೆದಿದ್ದಾರೆ. ಸಿನಿಮಾಟೋಗ್ರಫಿ, ಫಿಲಂ ಮೇಕಿಂಗ್ ಇವರ ಇತರ ಆಸಕ್ತಿಗಳು. ಸದ್ಯ 'ಸಿನಿಕ್ರಾಫ್ಟ್' ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

ವೃತ್ತಿ ಜೀವನದ ಹೊರತಾಗಿ ಕಥೆ, ಕವನ ಹಾಗೂ ಬರವಣಿಗೆಯಲ್ಲಿ ಶ್ರೀಧರ ಬನವಾಸಿ ಸಾಹಿತ್ಯಕ ಚಟುವಟಿಕೆಯ ಕ್ಷೇತ್ರದಲ್ಲಿ ವಿಭಿನ್ನವಾಗಿ ನಿಲ್ಲಲಿದ್ದಾರೆ ಅನ್ನುವುದಕ್ಕೆ ಈ ಕಥಾಸಂಕಲನ ಸಾಕ್ಷಿಯಾಗುತ್ತದೆ. ಇವರು ತುಂಬಾ ವಿಶಿಷ್ಟ ಬರಹಗಾರ ಅನ್ನುವುದರಲ್ಲಿ ಸಂದೇಹವೇನಿಲ್ಲ. ಬನವಾಸಿಯಂತಹ ಚಾರಿತ್ರಿಕ ಹಾಗೂ ಐತಿಹಾಸಿಕ ಮಹತ್ವದ ಊರಲ್ಲಿ ಹುಟ್ಟಿದ ಇವರಿಗೆ ಇದು ಸಾರ್ಥಕತೆಯ ಮನೋಭಾವ. ಪ್ರತಿಯೊಬ್ಬರಿಗೂ ಊರು ಎಂದರೆ ತವರಸಿರಿಯ ಸಂಭ್ರಮ ಇರುವುದು ಸಹಜ. 'ಶ್ರೀಧರ್', 'ಬನವಾಸಿ' ಊರನ್ನೇ ತನ್ನ ಹೆಸರಿನ ಹಿಂದೆ ಸೇರಿಸಿಕೊಂಡು ಬರೆಯುತ್ತಿರುವುದು ಅವರ ಊರಿನ ಬಗ್ಗೆ ಇರುವ ಉತ್ಕಟ ಪ್ರೀತಿಯನ್ನು ಸೂಚಿಸುತ್ತಿದೆ.

ಇವರ ಕಥಾಸಂಕಲನಕ್ಕೆ 'ಫಕೀರ' ಎಂಬ ಅಂಕಿತ ನಾಮವಿದೆ. ಎಲ್ಲರೊಳಗೊಬ್ಬ ಮಂಕುತಿಮ್ಮ ಎಂಬಂತೆ ಪ್ರತಿಯೊಬ್ಬರಲ್ಲಿ ಆ ವ್ಯಕ್ತಿಯ ಕನ್ನಡಿಯಂತೆ ಕೆಲಸ ಮಾಡುವ ಇನ್ನೊಬ್ಬ ವ್ಯಕ್ತಿ ಇದ್ದೇ ಇರುತ್ತಾನೆ. ಆತ ನಾವು ದಾರಿ ತಪ್ಪಿದಾಗ ದಾರಿ ತೋರಿಸುತ್ತಾನೆ ಕತ್ತಲೆಯಲ್ಲಿದ್ದಾಗ ಬೆಳಕು ಹಿಡಿಯುತ್ತಾನೆ. ನಮ್ಮ ನೋವು-ನಲಿವಿನ ಎಲ್ಲಾ ಹಾದಿಗಳಗೂ ಆತ ಮಾರ್ಗದರ್ಶಿಯಾಗಿರುತ್ತಾನೆ. ಎಲ್ಲರಲ್ಲೂ ಅವ್ಯಕ್ತವಾಗಿ ಕಾಣದೆ ಇರುವ ಈ ಸುಪ್ತಮನಸ್ಸಿನ ವ್ಯಕ್ತಿ ಶ್ರೀಧರ ಬನವಾಸಿಗೆ ಇಟ್ಟಿರುವ ಹೆಸರೇ 'ಫಕೀರ'.

ಇವರ ಚಿಕ್ಕವಯಸ್ಸಿನಿಂದಲೇ ಕವನ ಬರೆಯುವ ಪ್ರಯತ್ನ ಮಾಡಿದ್ದರೂ ಒಂದು ಹಂತದವರೆಗೆ ಪ್ರಕೃತಿ. ಶೃಂಗಾರ ಸೌಂದರ್ಯ ಇನ್ನಿತರ ವಿಷಯಗಳ ಬಗ್ಗೆ ಬರೆಯುತ್ತಾ ಕಾದಂಬರಿ ಮುಖಾಂತರ ಹೇಳಲಾಗದನ್ನು ಕಥೆಗಳ ಮೂಲಕ ಕಥೆಗಳ ಮೂಲಕ ಹೇಳಲಾಗದ್ದನ್ನು ಕವಿತೆಯಲ್ಲಿ ಹೇಳುತ್ತಾ ಹೋದರು. ಈ ರೀತಿಯಲ್ಲಿ ಅವರ ಸಾಹಿತ್ಯವು ಬೆಳೆಯಿತು. ಫಕೀರರ ಸಂಕಲನ ಒಂದಲ್ಲಾ ಒಂದು ಕಾರಣಕ್ಕೆ ನಮಗೆ ತುಂಬಾ ಇಷ್ಟವಾಗುತ್ತದೆ. ಮನಸ್ಸಿಗೆ ತುಂಬ ಹತ್ತಿರವೆನಿಸುತ್ತವೆ. ಇಂಥಹ ಸೃಜನಶೀಲ ಮನಸ್ಸಿನ ಏನಾದರೂ ಮಹತ್ತರವಾದದ್ದನ್ನು ಸಾಧಿಸುವ ಕ್ರಿಯಾಶೀಲ ತುಡಿತಗಾರ ಶ್ರೀಧರ್ ಬನವಾಸಿ ಇವರ 'ಕಲಾವಿದರ ಕಥಾನಕ' ಪುಸ್ತಕವನ್ನು ಯಾವುದೇ ದೊಡ್ಡ ಪ್ರಕಾಶಕರಿಗಿಂತಲೂ ಕಡಿಮೆ ಇಲ್ಲದಂತೆ ಪ್ರಕಟಿಸಿ, ಅದಕ್ಕೊಂದು ಪ್ರತಿಷ್ಠಿತ 'ವಿಶೇಷ ಅತ್ತಿಮಬ್ಬೆ' ಪ್ರಶಸ್ತಿಯನ್ನು ಮೊದಲ ಪುಸ್ತಕಕ್ಕೆ ಗಳಿಸಿಕೊಂಡ ಇವರ ಕಾರ್ಯಶೀಲತೆ ಮೆಚ್ಚಬೇಕು.

ಇವರು ಬೆಂಗಳೂರಿಗೆ ಬಂದು ಅನೇಕ ವರ್ಷಗಳಾಗಿದ್ದರು ಇವರ ಮನಸ್ಸಿನಲ್ಲಿ ನಾನು ಯಾವ ಸಾಧನೆ ಮಾಡಿದೆ ಇಷ್ಟುವರ್ಷವಾಯಿತು ಎಂದು ಅವರಿಗೆ ಅವರೇ ಪ್ರಶ್ನೆ ಹಾಕಿಕೊಂಡಿದ್ದರು. ಇವರ ಜೀವನದಲ್ಲಿ ಅನೇಕ ಬಾರಿ ಸೋತು-ಗೆದ್ದವರು, ಅನೇಕ ನೋವು-ನಲಿವುಗಳನ್ನು ನುಂಗಿದವರು. ಇವರಿಗೆ ಬಹಳಷ್ಟು ಕನಸುಗಳು ಆಸೆಗಳು ಇದ್ದವು. ಪ್ರತಿನಿತ್ಯ ನಮ್ಮೊಳಗೆ ಹೋರಾಟ ಮಾಡುವ ವ್ಯಕ್ತಿಗೆ ಇವರು ಇಟ್ಟುಕೊಂಡಿರುವ ಹೆಸರೇ 'ಫಕೀರ' ಎಲ್ಲರೊಳಗೊಬ್ಬ ಆ ತರಹದ ವ್ಯಕ್ತಿ ಇದ್ದೇ ಇರುತ್ತಾನೆ. ಆತ ನಮ್ಮ ಈ ಜಡ ದೇಹವನ್ನು ನಿಯಂತ್ರಿಸುತ್ತಾನೆ. ಏನಾದರೂ ಸಾಧಿಸುವಂತೆ ಮಾಡುತ್ತಾನೆ. ಇವರು ನಗುವಿನ ಮುಖವಾಡ ಹೊತ್ತಿರುವ ಜನರನ್ನು ತನ್ನ ಒಳಗಣ್ಣಿನಿಂದ ನೋಡಿ ಅವರ ಮನಸ್ಸನ್ನು ಅರ್ಥ ಮಾಡಿಕೊಂಡು ಅವರೊಳಗೆ ಅವಗಾಹಿಸುವ ಪ್ರಯತ್ನಕ್ಕೆ ಕೈಹಾಕುತ್ತಾನೆ. ಹಾಗೆಯೇ ಸುತ್ತಲೂ ಕಾಣುವಂತಹ ಸುಪ್ತ ಮನಸ್ಸುಗಳನ್ನು ಹುಡುಕಿ ಅವರನ್ನು ಸಂವೇದಿಸುವ ಪ್ರಯತ್ನಕ್ಕೆ ಕೈಹಾಕಿದ್ದರೆ.

ಒಳಗಿನ ಸ್ಫೂರ್ತಿ ಇಲ್ಲದೇ ಹೋದರೆ ಬರೆಯುವವನ ಬರವಣಿಗೆ ರುಚಿಸುವುದಿಲ್ಲ. ಹಾಗಾಗಿ ಸಾಹಿತಿಗಳೆಲ್ಲಾ ತಮ್ಮಲ್ಲಿನ ಸ್ಫೂರ್ತಿಯ ಸೆಲೆಯನ್ನು ಬೇರೆಬೇರೆ ರೀತಿಯಲ್ಲಿ ವರ್ಣಿಸುತ್ತಾ ಹೋಗುತ್ತಾರೆ. ಫಕೀರ ಅವರ ಬದುಕಲ್ಲಿ ಅನೇಕ ವರ್ಷದ ಅನುಭವವಿದೆ. ನಿರುದ್ಯೋಗ, ಹಸಿವು, ನಿರಾಶೆ, ಸೋಲು, ಅವಮಾನ, ಜಿಗುಪ್ಸೆ, ಆಸೆ, ಸಾಲ, ಕಾಮ, ಒಂಟಿತನ, ಮೋಸ ಇನ್ನು ಇವುಗಳೆಲ್ಲವನ್ನೂ ಹತ್ತಿರದಿಂದ ನೋಡಿ ಅನೇಕ ನೆನಪುಗಳನ್ನು ಸಂದರ್ಭಗಳನ್ನು ಆಕಸ್ಮಿಕವಾಗಿ ಬರಹಗಾರರನ್ನಾಗಿ ಮಾಡಿಬಿಟ್ಟಿದ್ದವು.

ಇವರು ಎಂಜಿನಿಯರಿಂಗ್ ಆರಂಭದಲ್ಲಿ ಅಂದುಕೊಂಡ ವೃತ್ತಿ ಜೀವನಕ್ಕೆ ಎಲ್ಲೋ ಒಂದುಕಡೆ ಪದವಿಯೇ ದಾರಿಗೆ ಮುಳ್ಳಾಗಿತ್ತು. ಹೀಗಿದ್ದರೂ ಸಾಹಿತ್ಯದ ಅಭಿರುಚಿ ಜೊತೆಗೆ ಇವರಲ್ಲಿದ್ದ ವಿಜ್ಞಾನ ಹಾಗೂ ತಾಂತ್ರಿಕ ಕೌಶಲ್ಯತೆಯ ಜ್ಞಾನ ಬೇರೆ ರೀತಿಯಲ್ಲಿ ಬೆಳೆಯಲು ಪೂರಕವಾಯಿತು. ಇವರ ಕಥೆಗಳಲ್ಲಿ ಎರಡು ಕಥೆಗಳು ರಾಜ್ಯಮಟ್ಟದ ಕಥಾಸ್ಪರ್ಧೆಗೆ ಕಳುಹಿಸಿದ 'ಹಲ್ಕಾ ಬದುಕಿನ ನಡುವೆ', 'ಕ್ಷಣ ಕತ್ತಲೆಯ ಭಯ', ರಾಜ್ಯಮಟ್ಟದ ಕಥಾಸ್ಪರ್ಧೆಯಲ್ಲಿ ಪ್ರಶಂಸೆ ಪಡೆದವು.

'ಅಮ್ಮನ ಆಟೋಗ್ರಾಫ್' ಕಥಾಸಂಕಲನದ ಮೂಲಕ ಓದುಗರಿಗೆ ಪರಿಚಯವಾಗಿರುವ ಇವರ ಮೊದಲ ಕೃತಿಗೆ ಅಪಾರ ಓದುಗರನ್ನು ಪಡೆದುಕೊಂಡಿತು. 'ಅಮ್ಮನ ಆಟೋಗ್ರಾಫ್' ಕಥಾಸಂಕಲನಕ್ಕೆ 'ಕೆ.ವಾಸುದೇವಾಚಾರ್ ದತ್ತಿ ಪ್ರಶಸ್ತಿ', 'ಅರಳು ಸಾಹಿತ್ಯ ಪ್ರಶಸ್ತಿ'ಗಳು ಸಂದಿವೆ. 'ದೇವರ ಜೋಳಿಗೆ' ಎರಡನೇ ಕಥಾಸಂಕಲನ 'ತಿಗರಿಯ ಹೂಗಳು' ಇವರ ಕವನ ಸಂಕಲನವಾಗಿದೆ.

# ಅಧ್ಯಾಯ : ೪

## ಜಾಗತೀಕರಣ ಪ್ರಭಾವದ ಮಗ್ಗಲುಗಳು:

ಜಾಗತೀಕರಣದ ಪ್ರಭಾವದ ಮಗ್ಗಲುಗಳು ಜಾಗತೀಕರಣ ಸಂಸ್ಕಾರವಂತ ಭಾರತೀಯತೆ ನೆಲೆಯಾಗಿರುವ ಹಳ್ಳಿಗಾಡುಗಳನ್ನು ಬಿಟ್ಟಿಲ್ಲ ಎಂಬ ಸತ್ಯವನ್ನು ಫಕೀರ ಅವರ ಕಥೆಗಳಲ್ಲಿ ಕಾಣಬಹುದು. ಬನವಾಸಿ ಕೆಂಬಳ್ಳಿ, ಸಂತೆಪೇಟೆ, ಬಾಳಗುಂಡಾ, ಪಿಜ್ಜಾರ್‌ಪೇಟೆ, ಚಿನ್ನ ಮುಳಗುಂದ, ದೊಡ್ಡಕೇರಿ, ಮುದ್ದಗೆರೆ, ಕುಪ್ಪವಾಡ, ರಾಮಸಾಗರ, ಹಿರೇಕೆರೂರು, ರಾಣಿಬೆನ್ನೂರು, ಬ್ಯಾಡಗಿ, ದಾಸನಕೊಪ್ಪ ಜಡೆ, ಹಾನಗಲ್ ಮುದ್ರಳ್ಳಿ, ಹಾವೇರಿ, ರಟ್ಟೆಹಳ್ಳಿ, ಮಾಸೂರು, ದಾವಣಗೆರೆ, ತಿಗಣಿ, ಭಾಸಿ, ಕಪಗೇರಿ ಮುಂತಾದ ಸುತ್ತಲ ಪ್ರದೇಶದ ಸುತ್ತು ಬೆಳೆದು ಸಾಗುವ ಫಕೀರ ಕಥೆಗಳು ಇದು ಆಗಿದೆ ಅಂತ ದುಬೈ, ಆಸ್ಟ್ರೇಲಿಯಾ, ಬೆಂಗಳೂರು, ಅಮೆರಿಕಾ, ಕೆನಡಾವರೆಗೆ ತನ್ನ ಆಲೋಚನೆಯ ಚಾಚುಗಳು ಕಥೆಗಳು ಹೇಳುತ್ತಾ ಸಾಗುತ್ತವೆ.

ಮುಕ್ತರಲ್ಲ ಮುಗ್ಧರು, ಲಾವಣಿ ನಂಟಿದ್ದ ಜನ ಇದ್ದಕಿದ್ದಂತೆ ನಾಗರಿಕತೆಯ ಸೋಗಿನಲ್ಲಿ ದೊಡ್ಡದೊಡ್ಡ ಕಟ್ಟಡಗಳು, ಅಪಾರ್ಟ್‌ಮೆಂಟ್‌ಗಳು ತಲೆ ಎತ್ತಿ ಜನರ ಮನಸ್ಸಿನಲ್ಲಿ ನಾನಾ ರೀತಿಯ ಆಸೆ-ಆಕಾಂಕ್ಷೆಗಳು ಬೆಳೆಯುತ್ತಾ ಹೋಗುತ್ತವೆ. ಜನರು ತಮ್ಮದೆ ಆದ ಒಂದು ನೆಮ್ಮದಿಯ ನೆಲೆಯನ್ನು ಕಾಣದೆ ಸಂಬಂಧ ಎಂಬುದು ಮರೀಚಿಕೆಯಾಗಿ ಹಣ, ಆಸ್ತಿ ಇದರ ಮೇಲೆ ವ್ಯಾಮೋಹವನ್ನು ಹೆಚ್ಚಿಸಿಕೊಂಡು ತಮ್ಮ ಸ್ವಂತಿಕೆಯ ಭಾವನೆಯನ್ನು ಕಳೆದುಕೊಂಡು ಎಲ್ಲವನ್ನು ವ್ಯಾಪಾರ ದೃಷ್ಟಿಯಲ್ಲಿ ನೋಡುತ್ತಾ ಸಾಗಿದ್ದಾರೆ.

ಜಾಗತೀಕರಣದ ಹೆಸರಿನಲ್ಲಿ ರಿಯಲ್ ಎಸ್ಟೇಟ್, ಟೌನ್‌ಷಿಪ್, ಕಮೀಷನ್ ದಂಧೆ, ಮರಳು ದಂಧೆ, ಕೇಬಲ್ ಗಲಾಟೆ, ಲ್ಯಾಂಡ್ ಮಾಫಿಯಾ, ಎಂಬ ಕ್ರೈಂ ಉದ್ಯಮಗಳನ್ನು ಹಿಡಿದು ಅವರ ಕಥೆಗಳನ್ನು ತಮ್ಮ ಮಣ್ಣಿನ ಗುಣವನ್ನು ಬಿಟ್ಟು ಹಲವಾರು ಸಾರಿ ದಿಕ್ಕುತಪ್ಪಿದ ಪ್ರಸಂಗಗಳನ್ನು ಅನುಸೂಯಮ್ಮನ ಗರಡಿ ಮನೆ, ಅಪ್ಪನ ಟೆಲಿಗ್ರಾಂ, ಅನಾಥ ಮನಸ್ಸುಗಳು ಕತೆಗಳಲ್ಲಿ ಕಾಣಬಹುದು. ಇಲ್ಲೆಲ್ಲಾ ವಸಾಹತುಶಾಹಿ ದಬ್ಬಾಳಿಕೆಯ ನೇರಚಿತ್ರಣವನ್ನು ನೋಡುತ್ತಾ ಹಾಸಿಗೆ ಇದ್ದಷ್ಟು ಕಾಲುಚಾಚಿದ ಮಂದಿ, ಪೋಲೀಸ್ ಸ್ಟೇಷನ್ ಕೊಲೆ, ಅತ್ಯಾಚಾರ, ಆತ್ಮಹತ್ಯೆ ಮುಂತಾದ ಪ್ರಕರಣಗಳಲ್ಲಿ ಸಿಲುಕುವಂತಾಗುತ್ತದೆ. ಭೂಗತ ಜಗತ್ತಿನ ರಾಜಕಾರಣ ವಿಷಯಗಳನ್ನು ಎಲ್ಲಾ ಸಿನಿಮಾದ ಪರದೆಯ ಮೇಲೆ ನೋಡುತ್ತಿದ್ದವರು. ಅಂದರೆ ಯಾರೋ ಹೇಳಿದ ಮಾತು ಪತ್ರಿಕೆ ದೂರದರ್ಶನ ರೇಡಿಯೋಗಳಲ್ಲಿ ನೋಡುತ್ತಿದ್ದವರು ಅಲ್ಲಿ ನೋಡಿ ಅವರ ಕಲ್ಪನೆ ಕನಸುಗಳಲ್ಲಿ ಕಾಣುತ್ತಿದ್ದವರು. ಅವರ ಪರದೆಯ ಮೇಲೆ ನೋಡುತ್ತಿದ್ದವರು ಅಂತಹುದೇ ಬದುಕಿನಲ್ಲಿ ಸಿಲುಕುವ ಪಾತ್ರಗಳನ್ನು ಅವರ ಕಥೆಗಳ ಉದ್ದಕ್ಕೂ ಕಾಣಬಹುದು.

ತಮ್ಮ ಬದುಕಿನಲ್ಲಿ ಹಲವು ರೀತಿಯ ಘಟನೆಗಳು ತಮಗೆ ತಿಳಿಯದಂತೆ ತಪ್ಪು ಸರಿ ಎಂಬ ಪರಿಕಲ್ಪನೆಯು ಇಲ್ಲದೇ ತಾವು ಬದುಕುವ ಸಲುವಾಗಿ ಹೊಟ್ಟೆಯ ಪಾಡಿಗೆ ತಮ್ಮ

ಬದುಕನ್ನು ಮುಂದುವರಿಸಲು ತಾವು ನಂಬಿಕೊಂಡಿದ್ದ ಕುಟುಂಬವನ್ನು ನಡೆಸಿಕೊಳ್ಳಲಾಗದೆ ತಮಗೆ ಇಷ್ಟವಿಲ್ಲದ ಬದುಕನ್ನು ಪ್ರೀತಿಸುವುದು, ಕೆಲವು ಸಲ ಬದುಕನ್ನು ದ್ವೇಷಿಸುವ ಅನೇಕ ದೃಶ್ಯಗಳು ಬರುವುದನ್ನು ನಾವು ನೋಡುತ್ತಲೇ ಬಂದಿರುವ ಹಾಗೆ ಎಳೆ ಎಳೆಯಾಗಿ ಜೀವನದ ಒಂದು ಸುಂದರ ಕಲ್ಪನೆಯ ಹಿಂದೆ ಎಷ್ಟು ನೋವು-ನಲಿವುಗಳು ಇದೆ. ಅದರ ಸೂಕ್ಷ್ಮತೆಯ ನಡುವೆ ನಡೆಯುವ ಸಂಘರ್ಷಗಳು ಬದುಕಿನ ಹೋರಾಟದ ನೆಲೆಯಲ್ಲಿ ನೋಡುತ್ತಾ ಸಾಗುತ್ತೇವೆ.

ಜನರು ಒಂದು ಚೌಕಟ್ಟಿನ ನೆಲೆಯಲ್ಲಿ ತಮ್ಮ ಬದುಕನ್ನು ತುಂಬ ಪ್ರೀತಿಸುತ್ತಾ ತಮ್ಮ ಸುತ್ತಮುತ್ತಲಿನ ಬದುಕನ್ನು ನೋಡುತ್ತಾ ಸಾಗುತ್ತದೆ. ಜನರು ಹಣದ ಆಸೆಯಿಂದ ಅತಿ ಕಡಿಮೆ ಸಮಯದಲ್ಲಿ ದೊಡ್ಡವರಾಗಿ ಬೆಳೆಯುವ ಆಸೆಯನ್ನು ಬೆಳೆಸಿಕೊಂಡು ಹೋಗುತ್ತಾರೆ. ಈ ಜಾಗತೀಕರಣ ತಲೆಎತ್ತಿದ ನಂತರ ಯಾವುದೋ ಪೆಟ್ಟಿಗೆ ಅಂಗಡಿಯಲ್ಲಿ ಎರಡು ರೂಪಾಯಿ ಚಹಾ ಕುಡಿದು ಅದೇ ಸ್ವರ್ಗ ಎಂದುಕೊಳ್ಳುತ್ತಾ ಇದ್ದ ಜನರು ಇಂದು ಐ.ಟಿ.ಬಿ.ಟಿ ಕಂಪನಿಗಳನ್ನು ಪ್ರಾರಂಭಿಸಿ ಕೆಫೆ ಎನ್ನುವುದಕ್ಕೆ ಬಂದಿದ್ದಾರೆ. ಅದೇ ಚಹಾ ನೂರಾರು ರೂಪಾಯಿಕೊಟ್ಟು ಚಹಾ ಕುಡಿಯುವುದಕ್ಕೆ ಬರುತ್ತಾರೆ. ಈ ರೀತಿಯಲ್ಲಿ ತಮಗೆ ತಿಳಿಯದಂತೆ ಎಂದೂ ಕಾಣದ ಅವರ ಬದುಕಿನಲ್ಲಿ ಎಲ್ಲಾ ಪರದೆಯ ಮೇಲೆ ನೋಡುತ್ತಿದ್ದ ಅವರು ನೈಜವಾಗಿ ಕಾಣುವುದನ್ನು ಕಥೆಗಳ ಉದ್ದಕ್ಕೂ ಕಾಣಬಹುದು.

ನರಸಿಂಹ ಒಬ್ಬ ಬುದ್ಧಿಜೀವಿಯಾಗಿ ವೇಶ್ಯಾವಾಟಿಕೆ ದಂಧೆಯ ಹಿನ್ನೆಲೆ ತಿಳಿಯಲು ಹೋದಾಗ ಅಲ್ಲಿ ಪರಿಚಿತವಾದ ಸುಂದರಿ ಮಲ್ಲಿಕಾಳ ಒಳ್ಳೆಯ ಚಪ್ಪಲಿಗಳು ಜೊತೆಗೆ ಚೌಕಾಸಿ ಮಾಡಿಕೊಂಡು ಬದುಕುತ್ತಿರುವ ಕೆಟ್ಟ ಸತ್ಯಗಳನ್ನು ಕೇಳಿದಾಗ ಜಾಗತೀಕರಣ ಕತ್ತಲಿನ ಆಳದಲ್ಲಿ ಬೇರುಬಿಟ್ಟಿರುವ ಹಲವಾರು ಸಮಸ್ಯೆಗಳನ್ನು ಕಥೆಗಾರರು ಬಿಚ್ಚಿಡುತ್ತಾ ಸಾಗುತ್ತಾರೆ.

ಜೋಳ, ರಾಗಿ, ಮುಖ್ಯ ಬೆಳೆಯಾಗಿದ್ದ ಹಾಗೂ ಅದರಿಂದ ತಯಾರಿಸಿದ ತಿನಿಸುಗಳನ್ನು ಮತ್ತು ಮಂಡಕ್ಕಿ, ಗುರೆಳ್ಳು, ಅಗಸಿ, ಶೇಂಗಾ ಚಟ್ನಿ ತಿನ್ನುತ್ತಿದ್ದ ಜನರಿಗೆ ಇವತ್ತು ಹೆಂಡದ ಜೊತೆಗೆ ಗೋಬಿಮಂಚೂರಿ, ಮಷ್ರೂಮ್, ಬೋಂಡಾ, ವೆಜ್, ನೂಡಲ್ಸ್, ರೋಟಿದಾಲ್, ಮಾಂಸದ ಅಡಿಗೆಗಳು ನಾಲಗೆಗೆ ರುಚಿ ಹತ್ತಿದವು. ಇಂದು ಅದು ಅವರಿಗೆ ಅತಿಯಾದ ಕಸದ ತರಹ ಕಾಣುವಂತಾಗಿದೆ. ಕೋಪಿವಾಡ ಅತಿಚಿಕ್ಕ ವಯಸ್ಸಿನಲ್ಲಿ ತಾನು ಮುಂದೆ ಬರಬೇಕು, ಚೆನ್ನಾಗಿ ದುಡಿಯಬೇಕು ಮುಂದೆ ದೊಡ್ಡ ಮನುಷ್ಯನಾಗಬೇಕು ತಮ್ಮ ಊರಿನಲ್ಲಿ ಒಂದು ದೊಡ್ಡ ಹೋಟೆಲ್ ಮಾಡಬೇಕು, ಬಯಲು ಸೀಮೆಯಲ್ಲಿ ತಿನ್ನುತ್ತಿದ್ದ ಜೋಳದ ರೊಟ್ಟಿ, ಅಂಬಲಿ, ಮಾಲುದಿ, ಗೋಧಿ ಹುಗ್ಗಿ, ಖಾರದಂಟು, ಮಿರ್ಚಿ, ಮಂಡಕ್ಕಿ, ಗುರೆಳ್ಳು, ಅಗಸಿ, ಶೇಂಗಾ ಚಟ್ನಿ ಖಾರದಂತಹ ಬಾಯಿಗೆ ನಾಲಗೆಯ ರುಚಿಗೆ ನಗರದ ಮಸಾಲೆ ದೋಸೆ, ಗೋಬಿ, ಮಂಡಕ್ಕಿ ಉತ್ತರ ಭಾರತ, ದಕ್ಷಿಣ ಭಾರತ ತಿನಿಸುಗಳನ್ನು ದೋಸೆ, ದಾಲ್, ರೋಟಿ, ಗೋಬಿಮಂಚೂರಿಯಂತಹ ವಿವಿಧ ಬಗೆಯ ತಿಂಡಿ-ತಿನಿಸುವ ಆಸೆ. ಆ ಅಡಿಗೆಗಳನ್ನು ಕಲಿಯಬೇಕು ಎಂಬ ಕೋಪಿವಾಡನ ಈ ಹೊಸರುಚಿಗಳನ್ನು ಕಲಿಯಬೇಕಾದ ತುರ್ತುಬಿತ್ತು. ಬದಲಾವಣೆಯಲ್ಲಿ ಜಗತ್ತಿನಲ್ಲಿ ಜನರು ಯಾವ ರೀತಿಯಲ್ಲಿ ಬದುಕುತ್ತಿದ್ದಾರೆ. ಆಯಾಯ ರೀತಿಯಲ್ಲಿ ಬದುಕಬೇಕು, ಅವರ ಇಷ್ಟ-ಕಷ್ಟಗಳ ನಡುವೆ ನಮ್ಮ

ಬದುಕನ್ನು ನಮ್ಮ ಜೀವನವನ್ನು ಬೆಳೆಸಿಕೊಳ್ಳುವ ತುರ್ತು ಅನಿವಾರ್ಯವಾಯಿತು. ಜನರಿಗೆ ಹಿಂದಿನ ದಿನಗಳಿಗಿಂತ ಮುಂದೆ ಬದಲಾವಣೆಯಾಗುತ್ತಿರುವ ದಿನಗಳು ಬಹಳ ಮುಖ್ಯವಾದವು. ಹೆಂಡತಿಯ ಜೊತೆಗಿನ ಸುಖಕ್ಕಿಂತ ಹೊರಗಿನ ಲಂಬಾಣಿ ಹೆಂಗಸರ ಸಹವಾಸ, ನಾಲ್ಕು ಕಾಸು ಸಂಪಾದಿಸಿ ಆಗಿನಿಂದ ಈ ಪ್ರದೇಶಿಗರಿಗೆ ರುಚಿಯಾಗತೊಡಗಿತ್ತು.

ಜಾಗತೀಕರಣ ಹೊಸ ಬಾರುಗಳು ಹುಟ್ಟಿಕೊಂಡು ಅಮಲಿಗೆ ತುತ್ತಾದ ಕೆಂಬಳ್ಳಿಯ ಸುತ್ತು ಹೆಣೆದುಕೊಂಡಿದೆ. ಕಥೆ ಅನಾಥ ಮನಸ್ಸುಗಳು ಬೆಂಗಳೂರಿನಿಂದ ಸುಮಾರು 20 ಕಿಲೋ ಮೀಟರ್ ದೂರದಲ್ಲಿದ್ದ ಬೃಹತ್ ಟೌನ್‌ಷಿಪ್ ಅಲ್ಲಿ ನಿರ್ಮಾಣವಾಗುತ್ತಿದೆ ಎಂದು ಗೊತ್ತಾಗಿದೆ. ತಡ [1]"ಕೊಡೆಹಿಡಿದುಕೊಂಡು ಆಸೆಗಣ್ಣಿನಿಂದ ಆಗಸದಲ್ಲಿದ್ದ ತಮ್ಮ-ತಮ್ಮ ನಕ್ಷತ್ರಗಳನ್ನು ನೋಡುತ್ತಾ ಕುಳಿತುಕೊಂಡಿದ್ದರೂ ಎಕರೆಗೆ 20 ಕೋಟಿ ಅಂತ ಅಂದರೆ, ಇನ್ನೊಬ್ಬರು 30 ಕೋಟಿ ಕೊಡ್ತೀವಿ, ಜಮೀನನ್ನು ನಮಗೆ ಬಿಟ್ಟುಕೊಡಿ" ಅಲ್ಲಿಯ ಜನತೆ ತಮ್ಮ ಸ್ವಂತಿಕೆಯನ್ನು ಕಳೆದುಕೊಂಡು ಮಾಧ್ಯಮದವರೆಗೆ ಒಳ್ಳೆಯ ಸುದ್ಧಿ ವಿಶೇಷವನ್ನು ನೀಡುವ ಊರಾಗಿ ಪರಿವರ್ತನೆಯಾದುದನ್ನು ಗಮನಿಸಬಹುದು. ಅಲ್ಲಿಯವರೆಗೂ ಆ ಕೆಂಬಳ್ಳಿ ಎಂಬ ಊರು ಇದೆ ಎಂಬುದೇ ಗೊತ್ತಿಲ್ಲದ ಜನತೆಗೆ ದಿಢೀರನೆ ಮಾಧ್ಯಮದಲ್ಲಿ ವಿಷಯವಾಗಿ ಎಲ್ಲರ ಬಾಯಿಯ್ಲಲಿಯೂ ಈ ಊರು, ಆ ಊರಿನ ಜನರು ಬಂದರು, ಆ ಊರಿನ ಜನರಿಗೆ ಇಲ್ಲದ ಗೌರವ ಮರ್ಯಾದೆಗಳು ಬರುವಂತಾಯಿತು. ಆ ಊರಿಗೆ ದೃಶ್ಯಮಾಧ್ಯಮದಲ್ಲಿ ನೋಡುತ್ತಿದ್ದ ಅಧಿಕಾರಿಗಳಾಗಿರಬಹುದು. ಜಾಹೀರಾತುಗಳಲ್ಲಿ ಬರುತ್ತಿದ್ದ ತಿಂಡಿ-ತಿನಿಸುಗಳೇ ಆಗಿರಬಹುದು. ದೂರದರ್ಶನದಲ್ಲಿ ಬರುತ್ತಿದ್ದ ಸುಂದರಿಯರ ಉಡುಗೆ-ತೊಡುಗೆಗಳು ಎಲ್ಲವೂ ಒಂದು ಮಾಯಾಲೋಕವಾಗಿದೆ. ಇವರಿಗೆ ಅದು ನೈಜಲೋಕದ ಸತ್ಯಗಳ ಅವರ ಕಣ್ಣಮುಂದೆ ಬಂದು ನಿಂತಿದೆ. ಅಪರೂಪಕ್ಕೊಮ್ಮೆ ಬಸ್ಸು ಕಾರುಗಳು ಬರುತ್ತಿದ್ದ ಊರಿಗೆ ಹೀಗೆ ದಿನಕ್ಕೆ ನೂರಾರು ಕಾರುಗಳು ಕಾಣಲಾರಂಭಿಸಿತು. ಹಾಗೆಯೇ ಸ್ವಲ್ಪ ದಿನದಲ್ಲಿ ಶ್ರೀಮಂತರಾಗಬೇಕು ನಾವು ನಾಲ್ಕು ಜನರ ಮುಂದೆ ಶ್ರೀಮಂತರು ಎನ್ನಿಸಿಕೊಳ್ಳಬೇಕು, ಕೆಂಬಳ್ಳಿಯ ಆಸ್ತಿಯನ್ನು ಮಾರಿ ಬೇಗನೆ ಶ್ರೀಮಂತರಾಗಬೇಕು ಎಂದು ಕನಸು ಕಾಣುವ ಜನ ತಮಗೆ ಅರಿವಿಲ್ಲದಂತೆ ತಮ್ಮ ಊರುಗಳನ್ನು ಬಿಟ್ಟುಹೋಗುವಂತಹ ಪರಿಸ್ಥಿತಿಯನ್ನು ಅನಾಥ ಮನಸ್ಸುಗಳಲ್ಲಿ ಕಾಣಬಹುದು. ಅಂತೆಯೇ ಈ ಪರಿಸ್ಥಿತಿಯಲ್ಲಿ ಕೆಲವೊಂದು ಕುಟುಂಬಕ್ಕೆ ಊರಿನ ಅಭಿವೃದ್ಧಿ ಒಂದು ಕುಟುಂಬದ ಸಂತೋಷಕ್ಕೆ ಕಾರಣವಾಗಿದೆ. ಮತ್ತೊಂದು ಕಡೆ ಸಾವಿನ ದಾರಿಯನ್ನು ತೋರಿಸುವುದನ್ನು ನಾವು ಕಾಣಬಹುದು. ತಂದೆ-ಮಗನ ಸಂಬಂಧ ಊರಿನ ಸಂಬಂಧ ಗೆಳೆಯನ ಸಂಬಂಧ ಎಲ್ಲವೂ ಈ ಅನಾಥ ಮನಸ್ಸು ಪಡೆದುಕೊಳ್ಳುತ್ತದೆ. ಒಂದುಹೊತ್ತು ಊಟಕ್ಕೆ ಕಷ್ಟಪಡುತ್ತಿದ್ದ ಜನ ಇಂದು ಲಕ್ಷಾಧಿಪತಿಗಳಾಗಿದ್ದಾರೆ.

ಅಲ್ಲಿಯ ಜಮೀನಿಗೆ ಕಂಪನಿಯವರು ಕೊಂಡುಕೊಳ್ಳುವಲ್ಲಿ ನಾನು ಮುಂದೆ ತಾ ಮಂದೆ ಅನ್ನುವಂತೆ ಎಲ್ಲರ ಕಣ್ಣು ಅಲ್ಲಿ ಬಿದ್ದು ಎಕರೆಗೆ ಇಪ್ಪತ್ತು ಕೋಟಿ ಅಂತ ಒಬ್ಬರು ಅಂದರೆ, ಇನ್ನೊಬ್ಬರು 30 ಕೋಟಿ ಕೊಡುತ್ತೀವಿ ಜಮೀನನ್ನು ನಮಗೆ ಬಿಟ್ಟುಕೊಡಿ ಅಂತ ಮುಂದೆ ಬರುತ್ತಿದ್ದಾರೆ. ಕೆಂಬಳ್ಳಿಯ ಜನಕ್ಕೆ ಇಂದು ಚಿನ್ನ ಸಿಗುವಂತಾಯಿತು. ಅಲ್ಲಿ ಇಂದು ಚಿಕ್ಕ-ಪುಟ್ಟ ಸಣ್ಣ-ಸಣ್ಣ ಅಂಗಡಿಗಳು ಇದ್ದವು. ಒಂದು ಸಿಕ್ಕರೆ ಇನ್ನೊಂದು ಇಲ್ಲ ಎನ್ನುವ

ರೀತಿಯಲ್ಲಿ ಇದ್ದ ಊರಿನಲ್ಲಿ ನಾನಾ ತರಹದ ಅಂಗಡಿ ಬೇರೆಬೇರೆ ರಾಜ್ಯದಿಂದ ಬಂದು ಇಳಿಯುತ್ತಿದ್ದ ಜನರು ಕೆಲಸಕ್ಕೆ ಅಲ್ಲಿಯೇ ಬಾಡಿಗೆ ಮನೆಗಳನ್ನು ಮಾಡಿಕೊಂಡು ಕೆಲಸಗಳನ್ನು ಮಾಡುತ್ತಿದ್ದಾರೆ. ಕೆಂಬಳ್ಳಿಯಲ್ಲಿ ಬಾಡಿಗೆ ಮನೆ ಎಂಬ ಕಲ್ಪನೆಯು ಇಲ್ಲದ ಊರಿಗೆ ಸಾವಿರಾರು ರೂಪಾಯಿ ಕೊಟ್ಟು ಬಾಡಿಗೆ ಇರಲು ಇಷ್ಟಪಡುತ್ತಿದ್ದ ಜನ ಹೊರ ರಾಜ್ಯಗಳಿಂದ ಬಂದು ತಮ್ಮ ಹೊಟ್ಟೆಪಾಡಿಗೆ ಇಲ್ಲಿಯೇ ಒಂದು ಅಂಗಡಿಯನ್ನು ಇಟ್ಟು ತಮ್ಮ ವ್ಯಾಪಾರ ವಹಿವಾಟು ನಡೆಸುತ್ತಿದ್ದರು. ಸೇಲಂನಿಂದ ವ್ಯಾಪಾರ ಮಾಡಲು ಬಂದ ವ್ಯಕ್ತಿ ಎಳನೀರು ವ್ಯಾಪಾರದಲ್ಲಿ ಮುಂದುವರೆದ ಎಂದರೆ ತನ್ನ ಕೆಲಸಕ್ಕೆ ಇನ್ನೊಬ್ಬ ಕೆಲಸದವನನ್ನು ಇಟ್ಟುಕೊಳ್ಳುವ ಮಟ್ಟಿಗೆ ಹೋದ. ಮೊದಲೆಲ್ಲ ಊರಿನಲ್ಲಿ 10 ರೂಪಾಯಿಗೆ ಸಿಗುತ್ತಿದ್ದ ಎಳೆನೀರು ಈಗ 25 ರೂಪಾಯಿ ಆಗಿ ಬಿಟ್ಟಿದೆ. [2]"ಏನಪ್ಪ ಎಳೆನೀರು ರೇಟು ಜಾಸ್ತಿ ಆಯ್ತಲ್ಲಪ್ಪ ಅಂತ ಮಧ್ಯಮ ವರ್ಗದ ಹೆಂಗಸರು ಕೇಳಿದರೆ, ನೋಡಮ್ಮ ಇಷ್ಟಇದ್ರೆ ತಗೊಳ್ಳಿ, ಇಲ್ಲಾಂದ್ರೆ ಬಿಡಿ" ಅಂತ ಧಿಮಾಕಿನಿಂದ ಹೇಳುತ್ತಿದ್ದ, ಕಂಪನಿ ತಲೆಎತ್ತಿದ ಮೇಲೆ ವೀಕೆಂಡ್‌ನ ಪಾರ್ಟಿ, ಮಲ್ಟಿಫ್ಲೆಕ್ಸ್ ಅಂತ ಮಜಾಮಾಡುತ್ತಿದ್ದ ಜನರಿಗೆ 25 ರೂಪಾಯಿ ಎಳೆನೀರು ಕಷ್ಟವಿರಲಿಲ್ಲ ಇಂದು ಬದುಕುವ ಆತ್ಮವಿಶ್ವಾಸ ಇಮ್ಮಡಿಯಾಗಿದೆ.

ಹಾಗೆಯೇ ಕೆಂಬಳ್ಳಿಯ ಜನರ ಕುಟುಂಬದ ಒಂದೊಂದು ರೀತಿಯ ಪರಿಸ್ಥಿತಿಯಲ್ಲಿ ಬದಲಾವಣೆ ಕಾಣುತ್ತಾ ಅನಾಥ ಮನಸ್ಸುಗಳಾಗಿದ್ದವು. ಕೆಂಬಳ್ಳಿಯ ಒಂದು ದೊಡ್ಡ ಮನೆತನದಲ್ಲಿ ನಡೆಯುವ ಘಟನೆಗಳು ಬೇರೆ ರೀತಿಯಿದ್ದು, ಚಿಕ್ಕಲಿಂಗೇಗೌಡರ ಇಬ್ಬರು ಹೆಣ್ಣುಮಕ್ಕಳು ಮದುವೆಯಾಗಿದ್ದರು. ಅವರಿಗೆ ಸಂಸಾರದಲ್ಲಿ ಗಂಡಂದಿರು ಹಣಕ್ಕಾಗಿ ತಮ್ಮ ಹೆಂಡತಿಯರನ್ನು ಮನೆಗೆ ಕಳುಹಿಸಿದರು. ಯಾವಾಗ ಕೆಂಬಳ್ಳಿಯ ಚಿಕ್ಕಲಿಂಗೇಗೌಡರ ಆಸ್ತಿಗೆ ಬೆಲೆ ಇದೆ ಎಂದು ಗೊತ್ತಾಯಿತು. ಅವರುಗಳು ತಮ್ಮ ಹೆಂಡತಿಯರನ್ನು ತಮ್ಮ ಮನೆಗೆ ಕರೆದುಕೊಂಡು ಹೋಗುವವರು ಅಲ್ಲಿ ಆಸ್ತಿಗೋಸ್ಕರ ತಮ್ಮ ಹೆಂಡತಿಯರು ಯಾವ ರೀತಿ ಹೇಳುತ್ತಾರೆ, ಅದೇ ರೀತಿಯಲ್ಲಿ ಇರುತ್ತಾರೆ. ಕೇವಲ ಆಸ್ತಿ-ಹಣಕ್ಕಾಗಿ ತಾನು ಒಬ್ಬ ಗಂಡಸು ಎಂಬುದನ್ನೇ ಮರೆತು ಗುಲಾಮರಂತೆ ಬದುಕಲು ಸಿದ್ಧರಾಗುವ ರೀತಿ ಕೇವಲ ಹಣದಿಂದ ಪ್ರೀತಿಯನ್ನು ಕೊಡುವುದಕ್ಕೆ ಹೋಗುವುದು.

ಕೆಂಬಳ್ಳಿಯ ದೊಡ್ಡಮನೆಯ ಕಥೆ ಇದು ಆದರೆ, ಚಿಕ್ಕ-ಚಿಕ್ಕ ಮನೆತನಗಳ ಇನ್ನೊಂದು ಕಥೆ [3]"ಅಯ್ಯೋ..ಇನ್ನೊಂದು ಅರ್ಧಗಂಟೆ ಸ್ವಲ್ಪ ಚದರ ಅಡಿ ಜಾಸ್ತಿ ಇದಿದ್ದರೆ ಇನ್ನೆರಡು ಲಕ್ಷ ಜಾಸ್ತಿ ಸಿಗುತ್ತಿತ್ತು. ಮಗಳ ಮದುವೆಯನ್ನು ಚೆನ್ನಾಗಿ ಮಾಡಬಹುದಿತ್ತು? ಮಗನಿಗೆ ಸ್ವಲ್ಪ ಹಣ ಕೊಟ್ಟು ಯಾವುದಾದರೂ ಬ್ಯುಸಿನೆಸ್‌ಗೆ ಹಚ್ಚಬಹುದಿತ್ತಲ್ವಾ? ಅಯ್ಯೋ ಮನೇನಾ ಮಾಡಿ ಮೇಲೆ ಸಿಂಗಲ್ ಬೆಡ್‌ರೂಂ ಮನೆ ಕಟ್ಟಿ ಬಾಡಿಗೆ ಹಣನಾದ್ರು ತಿಂಗಳ್ ತಿಂಗಳು ಎಣಿಸಬಹುದಿತ್ತಲ್ಲಾ".

ಇನ್ನೊಂದು ಕಡೆ ಕೆಂಬಳ್ಳಿಯ ಪೋಸ್ಟ್ ಆಫೀಸಿನಲ್ಲಿ ಶಾಮರಾಯಶಾಸ್ತ್ರಿಗಳು ಸುಮಾರು 33 ವರ್ಷಗಳಿಂದ ಕೆಲಸ ಮಾಡಿ ರಿಟೈರ್‌ಮೆಂಟ್ ತೆಗೆದುಕೊಂಡವರು. ತಮ್ಮ ಸ್ವಂತ ಊರು ಮೈಸೂರನ್ನು ಬಿಟ್ಟು ಕೆಂಬಳ್ಳಿಯಲ್ಲಿ ಸ್ವಂತ ಮನೆಯನ್ನು ಕಟ್ಟಿದ್ದರು. ಕೆಂಬಳ್ಳಿಯ ಜನರ ಪರಿಚಯ ಕೆಂಬಳ್ಳಿಯೊಂದಿಗೆ ಅವರಿಗೆ ಒಂಥರಾ ಸಂಬಂಧ

ಬೆಸೆದುಕೊಂಡಿತ್ತು. ಮಕ್ಕಳ ಜವಾಬ್ದಾರಿಯೂ ಮುಗಿದಿತ್ತು. ಚೈನಾದಲ್ಲಿ ಮಗ ಲಕ್ಷಾಂತರ ರೂಪಾಯಿಕೊಟ್ಟು 3 ಬೆಡ್‌ರೂಂ ಫ್ಲಾಟ್ ತೆಗೆದುಕೊಂಡಿದ್ದು ಮಗ ವಿಷ್ಣುವಿಗೆ ಅಪ್ಪ-ಅಮ್ಮನನ್ನು ಅಲ್ಲಿಗೆ ಕರೆಸಿಕೊಳ್ಳಬೇಕು ಎಂಬ ಆಸೆ ಜೊತೆಗೆ ಅವನ ಸ್ವಾರ್ಥವು ಇತ್ತು. ಮನೆಯ ತಿಂಗಳ ಇ.ಎಂ.ಐ. ಕಟ್ಟಬೇಕು. ಇವನ ಒಬ್ಬಳ ಸಂಬಳ ಸಾಕಾಗುವುದಿಲ್ಲ ಅದಕ್ಕೆ ತನ್ನ ಹೆಂಡತಿಯನ್ನು ಸಹ ಕೆಲಸಕ್ಕೆ ಸೇರಿಕೊಳ್ಳಲು ತಿಳಿಸಿ, ಸಂಪಾದಿಸುತ್ತಿದ್ದನು. ಇನ್ನು ವಿಷ್ಣುವಿಗೆ ಮದುವೆಯಾಗಿ 2 ವರ್ಷವಾದರೂ ಮಕ್ಕಳಾಗಿಲ್ಲ. ವಿಷ್ಣುವಿಗೆ ಮಗುವಿಗೋಸ್ಕರ ಆದಾಯವನ್ನು ಕಳೆಯುವುದು ಇಷ್ಟವಿಲ್ಲ. ಮಗ ವಿಷ್ಣುವಿಗೆ ಅಪ್ಪ-ಅಮ್ಮ ಬಂದರೆ ಮಕ್ಕಳನ್ನು ನೋಡಿಕೊಳ್ಳುತ್ತಾರೆ. ಆಗ ಇವಳು ಸಹ ಕೆಲಸಕ್ಕೆ ಹೋಗುತ್ತಾಳೆ ಎಂದು ಯೋಚನೆ ಮಾಡಿದ. ಆದರೆ ಅಪ್ಪ ಮಾತ್ರ ಅಲ್ಲಿಗೆ ಬರಲು ಇಷ್ಟಪಡುವುದಿಲ್ಲ. ಕೆಂಬಳ್ಳಿಯನ್ನು ಬಿಟ್ಟು ತಮಿಳುನಾಡಿಗೆ ಬರುವುದು ಅವರಿಗೆ ಇಷ್ಟವಿರಲಿಲ್ಲ. ಗೊತ್ತಿಲ್ಲದ ಭಾಷೆ, ಗೊತ್ತಿಲ್ಲದ ಜನರ ಜೊತೆ ಗೊಂಬೆಯಂತೆ ಇರುವುದು ಅವರಿಗೆ ಇಷ್ಟ ಇರುವುದಿಲ್ಲ. ಅವರಿಗೆ ಒಂದು ರೀತಿ ಜೈಲಿನಲ್ಲಿ ಇದ್ದಂತೆ. ಶಾಮರಾಯಶಾಸ್ತ್ರಿಗಳು ತಮ್ಮ ಮಗನಿಗೆ ನಾನು ಕೆಂಬಳ್ಳಿಯನ್ನು ಬಿಟ್ಟುಬರುವುದಿಲ್ಲ ನೀನೇ ಬೇಕಾದರೆ ಕೆಂಬಳ್ಳಿಯಲ್ಲಿ ಇದ್ದುಕೊಂಡು ಇಲ್ಲಿ ಕಂಪನಿ ಓಪನ್ ಮಾಡು ಎಂದು ಹೇಳುತ್ತಾರೆ. ಹೀಗೆ ಅಪ್ಪ-ಮಗನ ನಡುವೆ ಸಣ್ಣದಾಗಿ ಶೀತಲ ಸಮರವಿರುತ್ತದೆ.

ಈ ಸಂದರ್ಭದಲ್ಲಿ ಕೆಂಬಳ್ಳಿಯ ಅಭಿವೃದ್ಧಿಯ ಬಗೆಗಿನ ಸಚಿವರ ಹೇಳಿಕೆ ಶಾಮರಾಯಶಾಸ್ತ್ರಿಗಳನ್ನು ಸೋಲುವಂತೆ ಮಾಡಿ ಬಿಟ್ಟಿತ್ತು ತಮ್ಮ ಮನೆಯನ್ನು ಕಳೆದುಕೊಳ್ಳುವ ಆತಂಕ ಬಂದಿತ್ತು. ಇವರ ಸುಂದರ ಮನೆಯು ಸರ್ಕಾರ ಗುರುತು ಮಾಡಿದ ಜಾಗದಲ್ಲಿ ಇದೆ ಎಂದು ಗೊತ್ತಾಯಿತು. ಈ ಯೋಜನೆಗಳು ತಮ್ಮ ನಡುವಿನ ಮನುಷ್ಯ ಸಂಬಂಧಗಳು ಅಲ್ಲಾಡುವಂತೆ ಮಾಡಿತ್ತು. ಹಣ ಉಳಿಸಿ ಮನೆ ಮಾಡಿಕೊಂಡ ಇವರಿಗೆ ಅಪಾರ ಬೇಸರ ಉಂಟು ಮಾಡಿತ್ತು. ಮಗನಿಗೆ ಊರಿನಲ್ಲಿ ನಡೆದ ವಿಷಯದ ಬಗ್ಗೆ ಗೊತ್ತಾಗಿ, ಅಪ್ಪನ ಸೊಕ್ಕು, ಹಠಮಾರಿತನ, ಸ್ವಾಭಿಮಾನವನ್ನು ಮಣ್ಣುಮಾಡಿತು ಎನ್ನುವ ಖುಷಿ ಒಳಗೊಳಗೆ ಕುಣಿಯುವಂತೆ ಮಾಡಿತ್ತು. ಕೋಟಿಗಟ್ಟಲೆ ಕನಸು ಕಾಣುವ ಕೆಂಬಳ್ಳಿಯ ಜನರ ನಡುವೆ ಶಾಸ್ತ್ರಿಗಳ ಮನಸ್ಸು ಈಗ ಅನಾಥವಾಗಿತ್ತು. ತಮ್ಮ ಮನೆಯನ್ನು ಕೆಡವಲಾಗುವುದು ಅನ್ನುವ ಸುದ್ದಿ ತಿಳಿದಾಗಲಂತೂ ಶಾಸ್ತ್ರಿಗಳ ನೋವಿನ ಕಟ್ಟೆ ಒಡೆದು ಹೃದಯಾಘಾತದಿಂದ ತೀರಿಕೊಂಡರೂ ಶಾಸ್ತ್ರಿಗಳನ್ನು ಕೆಂಬಳ್ಳಿಯ ನೆಲದಲ್ಲೇ ಸುಡಲಾಯಿತು. ಮಗ ವಿಷ್ಣುವಿಗೆ ಕೊನೆಗೂ ಅವನು ತೆಗೆದುಕೊಂಡ ಮನೆಯಲ್ಲಿ ಉಳಿಯಲು ಆಗಲಿಲ್ಲ ಅನ್ನುವ ವಿಚಾರ ಆತನನ್ನು ಕೊನೆಯವರೆಗೂ ಕಾಡುತ್ತಲೇ ಇತ್ತು.

ಈ ಕೆಂಬಳ್ಳಿಯ ಅಭಿವೃದ್ಧಿಯಾದಂತೆ ಅಂಕಮ್ಮನ ಗುಡಿಗೆ ಗೋಪುರ ಕಟ್ಟಿಸಿ ದೇವಸ್ಥಾನ ಅಭಿವೃದ್ಧಿ ಮಾಡಿದ್ದಾರೆ. ಕೆಂಬಳ್ಳಿಯ ಕಥೆ ಹೀಗೆ ಅನಾಥ ಮನಸ್ಸುಗಳ ಕತೆಯಲ್ಲಿ ಬದಲಾದ ಮನಸ್ಸುಗಳು ಜಾಗತೀಕರಣ ಇಂದು ನಮ್ಮನ್ನು ಕಾಡುತ್ತಿರುವ ಭೂತವಾಗಿದ್ದು, ಕೆಂಬಳ್ಳಿಯ ಜನ ದೆವ್ವ ಹಿಡಿದವರಂತೆ ತಮ್ಮ ಸಹಜ ಜೀವನದಿಂದ ಓಡಿಹೋದ ದುರಂತವನ್ನು ಈ ಅನಾಥ ಮನಸ್ಸಿನಲ್ಲಿ ಎಳೆಎಳೆಯಾಗಿ ಚಿತ್ರಿಸಿದ್ದಾರೆ. ಟೆಕ್‌ಪಾರ್ಕ್ ಟೌನ್‌ಶಿಪ್ ನಿರ್ಮಾಣದಲ್ಲಿ ತೊಡಗಲು ಹಳ್ಳಿಯಿಂದ ನಗರಕ್ಕೆ ಬಂದ ಜನರು ಜೀವನ

ಸಾಗಿಸುತ್ತಿರುವ ಪರಿ. ಉತ್ತರ ಪ್ರದೇಶ, ಬಿಹಾರ್, ಆಂಧ್ರಪ್ರದೇಶ, ತಮಿಳುನಾಡು, ಉತ್ತರಕರ್ನಾಟಕದ ಬಡಮಂದಿ ರಸ್ತೆ ಬದಿಯ ಡಬ್ಬಿವಾಲಾ ಕೊಡುವ ಧೂಳಿನ ಊಟ ತಿಂದು ಹೊಟ್ಟೆ ತುಂಬಿಸಿಕೊಳ್ಳುವ ಚಿತ್ರವು ಇಲ್ಲಿವೆ. ಜಾಗತೀಕರಣದ ಬಹುರಾಷ್ಟ್ರೀಯ ಕಂಪನಿಗಳು ರೆಡಿಮೇಡ್ ರೆಡಿ ಟೂ ಕುಕ್ ಪ್ರಾಡಕ್ಟ್‌ಗಳನ್ನು ರೇಟ್ ನೋಡದೇ ತೆಗೆದುಕೊಳ್ಳುವ ಪರಿ ಇಷ್ಟವಾಗುತ್ತದೆ.

ಮೊದಲೆಲ್ಲಾ ಹೆಚ್ಚಾಗಿ ಸೀರೆ, ಲುಂಗಿ, ಪಂಚೆಯಲ್ಲಿ ಓಡಾಡುತ್ತಿದ್ದವರು ರಸ್ತೆಗಳಲ್ಲಿ ತುಂಡು ಬಟ್ಟೆಯಲ್ಲಿ ಬಿಳಿ ಬಿಳಿ ನುಣುಪಾದ ಚರ್ಮದ ಆರಂಕಿ ಸಂಬಳ ದುಡಿಯುವ ಸಾಫ್ಟ್‌ವೇರ್ ಹುಡುಗಿಯರಾದರು ಅಂಕಮ್ಮನ ಹಳೆಯ ಜಾತ್ರೆ ನೋಡಿದ ಊರಿನ ಹಳಬರೆಲ್ಲಾ ಈ ಹೊಸ ವ್ಯವಸ್ಥೆಯ ಜಾತ್ರೆಗೆ ಹೊಂದಿಕೊಂಡರು. ಹೊಸಹೊಸ ಮಳಿಗೆ, ಮಾಲ್‌ಗಳ ಓಪನ್ ಆಗಿ ಈ ಜಾಗತೀಕರಣ ವ್ಯವಸ್ಥೆಗೆ ಒಗ್ಗಿಹೋದರು. [4]"ಜನರ ಮನಸ್ಸುಗಳು ಬದಲಾವಣೆಯ ನೀರನ್ನು ಕುಡಿಯುತ್ತಿವೆ. ಜಾಗತೀಕರಣ, ಉದ್ಯಮೀಕರಣದ ಆಹಾರವು ಹೊಟ್ಟೆಯಲ್ಲಿ ತುಂಬಿಕೊಂಡಿರುವುದರಿಂದ ಕೆಂಬಳ್ಳಿಯಂತಹ ಅನೇಕ ಹಳ್ಳಿಗಳು ತಮ್ಮ-ತಮ್ಮ ಮೂಲಬೇರುಗಳನ್ನು ಕಳಚಿಕೊಂಡು ಸ್ವಾತಂತ್ರ್ಯಕ್ಕೆ ಹಪಹಪಿಸುತ್ತಿದ್ದರೂ, ಜನರು ಹಣದ ಅಂತಃಸತ್ವ ಅವರನ್ನು ಕೊಳೆಯುವಂತೆ ಮಾಡಿದೆ. ಒಟ್ಟಿನಲ್ಲಿ ಕತೆಯಲ್ಲಿ ಬಂದ ಒಂದು ಮಾತನ್ನು ಇನ್ನೊಮ್ಮೆ ಹೇಳುವುದಾದರೆ, ಹಳ್ಳಿಯ ಮೂಲಸತ್ವಗಳ ಒಳಉಡುಪುಗಳು ಮಣ್ಣು ಸೇರುತ್ತಿವೆ. ಹಳ್ಳಿಯು ಅಭಿವೃದ್ಧಿಯ ಹೊಸಸೀರೆ ಉಟ್ಟರೂ ದೇಹ ಮಾತ್ರ ಬೆತ್ತಲೆಯಾಗಿದೆ. ಮುಚ್ಚಿಕೊಂಡರೂ ಎಲ್ಲವೂ ಕಾಣುತ್ತಿದೆ ಬದಲಾವಣೆಯ ನೆಪದಲ್ಲಿ ಹಳ್ಳಿಯ ಮನಸ್ಸುಗಳು ಅನಾಥವಾಗುತ್ತಿವೆ".

ಜಾಗತೀಕರಣ ಹೆಸರಲ್ಲಿ ಕೆಂಬಳ್ಳಿ ಹಲವಾರು ಬದಲಾವಣೆಯನ್ನು ಕಂಡುಕೊಂಡಿದ್ದಾರೆ ಹಣದ ಹಂಬಲದಲ್ಲಿ ಜನರು ಕಂಗಾಲು ಆಗಿ ಮೂಲಬೇರು ಕಳೆದುಕೊಂಡು ಅನಾಥಭಾವ ಎಲ್ಲರ ಮನಸ್ಸುಗಳಲ್ಲಿ ಹರಿದಾಡುತ್ತಿರುವುದನ್ನು ಕಥೆಗಾರ ಗುರುತಿಸುತ್ತಾರೆ. ವಿದೇಶದಲ್ಲಿ ದುಡಿದು ಒಳ್ಳೆಯ ಬದುಕನ್ನು ಕಟ್ಟಿಕೊಳ್ಳಬೇಕು ಎಂಬ ಹಿರಿದಾದ ಆಸೆ ನಾಯಕ್‌ನ ಅಪ್ಪನ ಟೆಲಿಗ್ರಾಮ್ ಕತೆಯಲ್ಲಿ ಬರುತ್ತಾನೆ. ಅರಬ್ ದೇಶಗಳಾದ ದುಬೈ, ಕುವೈತ್‌ಗಳಿಗೆ ಸಾಗರ, ಶಿವಮೊಗ್ಗ, ಶಿರಸಿ, ಕಾರವಾರದಿಂದ ಕೆಲಸಕ್ಕೆ ಎಂದು ಹೋಗಿ ಹಣ ಮಾಡಿಕೊಂಡು ಬಂದ ಯುವಕರ ಉತ್ಸಾಹ ನೋಡಿದ ಅಪ್ಪ ದೊಡ್ಡ ಕನಸಿನೊಂದಿಗೆ ತನ್ನ ಊರನ್ನು ಬಿಟ್ಟು ದುಬೈ ಎಂಬ ಹೊಸ ಲೋಕಕ್ಕೆ ಕಾಲಿಡುತ್ತಾನೆ. ತನಗೆ ಯಾರು ಪರಿಚಯವಲ್ಲದ ಅದೃಶ್ಯಲೋಕ. ಒಂದುದಿನ ಕೊನೆಗೆ ತನ್ನ ಹೆಂಡತಿ ಮಕ್ಕಳಿಂದಲೇ ಅದೃಶ್ಯವಾಗುವಂತೆ ಮಾಡಿದೆ.

ದುರಂತವನ್ನು ಅಪ್ಪನ ಟೆಲಿಗ್ರಮ್ ಕಥೆಯಲ್ಲಿ ಕತೆಗಾರ ಬಿಚ್ಚಿಡುತ್ತಾ ಕತೆಯಲ್ಲಿ ನಗರದ ಬದುಕಿನ ಅನುಭವ ಮನುಷ್ಯನ ಸಂಬಂಧಗಳ ಟೊಳ್ಳು-ಗಟ್ಟಿತನ ಸ್ವಾರ್ಥ ಅಸಹಾಯಕತೆ, ಅವಮಾನ, ಕ್ರೌರ್ಯಗಳಂತಹ ಆದಿಮ ಭಾವನೆಗಳನ್ನು ಶೋಧಿಸುವುದೇ ಆಗಿದೆ. ಹಾಗೆಯೇ ಹೊಸ ಪ್ರಪಂಚವನ್ನು ನಾವು ಅದರ ಜೊತೆಯಲ್ಲಿ ಹೋಗುವ ರೀತಿ

ಸುತ್ತಲಿನ ಜಗತ್ತನ್ನು ತೋರಿಸಿದ್ದಾರೆ. ಕಾಣುವ ವ್ಯಕ್ತಿಗಳು ಕಾಣವೇ ಇರುವ ಜನಗಳು ಸುತ್ತಲು ಅಮೂರ್ತವಾಗಿ ನಮ್ಮೊಂದಿಗೆ ಸಂಭಾಷಿಸುತ್ತಲೇ ಇರುತ್ತಾರೆ.

ಈ ಕಥೆಯಲ್ಲಿ ಒಂದುಕಡೆ ಗ್ರಾಮಾಂತರ ಬದುಕಿನ ಜೀವಂತ ಲವಲವಿಕೆಯಿದ್ದರೆ, ಇನ್ನೊಂದೆಡೆ ನಗರದ ಬದುಕಿನ ಯಾಂತ್ರಿಕತೆ ಕ್ರೌರ್ಯಗಳು ಎದ್ದುಕಾಣುತ್ತವೆ. ಅದರ ಬಹುಮುಖ್ಯವಾಗಿ ಮಾನವೀಯ ಸಂಬಂಧಗಳ ಮಗ್ಗಲು ಶೋಧಿಸುತ್ತದೆ. ಈ ಕಥೆಯಲ್ಲಿ ತಾಯಿ ಮಗನ ಸಂಬಂಧ, ಮಗ, ಅಪ್ಪನ ಸಂಬಂಧ, ತಾಯಿಯ ನೋವು ಮಗ ಅಪ್ಪನನ್ನು ಹುಡುಕಿಕೊಂಡು ಹಲವು ಪ್ರಶ್ನೆಗಳೊಂದಿಗೆ ಹೋದ ಮಗ, ಅಪ್ಪನ ಪರಿಸ್ಥಿತಿ, ಆ ನಗರ ಪ್ರದೇಶದ ಜೀವನವನ್ನು ನೋಡಿ ತಾನೇ ಬದಲಾಗುವುದು ನಿಜವಾದ ನಗರೀಕರಣದ ಕಷ್ಟಕರ ನೈಜ ಬದುಕನ್ನು ನಾಯಕ ಚಿಕ್ಕವಯಸ್ಸಿನಲ್ಲಿ ತನ್ನ ತಾಯಿ ಪಟ್ಟ ಅವಮಾನ, ನೋವು, ಕಷ್ಟ ಎಲ್ಲವೂ ಮನ ಕಲುಕುವಂತೆ ಮಾಡಿದೆ.

ಬೆಂಗಳೂರಿನಿಂದ ದುಬೈಗೆ ಪ್ರಯಾಣ ಮಾಡುವುದರಿಂದ ಈ ಕತೆಯು ಪ್ರಾರಂಭವಾಗುತ್ತದೆ. 'ಪ್ರಥಮ ಚುಂಬನಂ ದಂತಭಗ್ನಂ' ರೀತಿ ಆಗಬಾರದೆಂದು ವಿದೇಶ ಪ್ರಯಾಣಕ್ಕೆ ಹೋಗುವ ಮೊದಲು ಎಲ್ಲಾ ವಿಷಯವನ್ನು ತಿಳಿದುಕೊಂಡು ಹೋಗುತ್ತಾರೆ ಅಲ್ಲಿ ಅಕ್ಕ-ಪಕ್ಕದವರ ಜೊತೆ ಯಾವ ರೀತಿಯಲ್ಲಿ ವರ್ತಿಸಬೇಕು, ಹೇಗೆ ಸಭ್ಯವಾಗಿ ಇರಬೇಕು ಎಂಬ ಜಾಗರೂಕತೆಯಿಂದ ಮಾನಸಿಕವಾಗಿ ತಯಾರಾಗಿ ಬಂದಿದೆ. ಅರಬ್ ದೇಶದ ಸುಂದರಿಯರ ಓಡಾಟ, ಸಣ್ಣನಗುವಿನ ಅಪ್ಸರೆಯರ ಬೇರೆಬೇರೆ ಜನಗಳು ಬೇರೆಬೇರೆ ಭಾಷೆ ನಮ್ಮವರು ಸಿಕ್ಕರೆ ಶಿರಸಿಯ ಮಂಜುನಾಥನಾಯ್ಕ ನಾನು ಕುವೈತ್‌ನಲ್ಲಿ ಒಬ್ಬ ಶೇಖ್‌ಗಳ ಮನೆಯಲ್ಲಿ ಕೆಲಸಕ್ಕೆ ಇದ್ದೇನೆ ಎಂದು ಪರಿಚಯ ಮಾಡಿಕೊಂಡರು. [5]"ತಿಂಗ್ಳ ಸಂಬ್ಳದಲ್ಲಿ ಕಡ್ಮೆ ಅಂದ್ರೂ ನಲವತ್ತು ಸಾವಿರ ಉಳ್ಸತ್ತೀನಿ, ಅದನ್ನೇ ಊರಲ್ಲಿರುವ ಹೆಂಡ್ತಿ, ಮಕ್ಳಿಗೆ ಕಳ್ಸಕೊಡ್ತೀನಿ.. ಎಷ್ಟು ಬೇಕೋ ಅಷ್ಟು ಖರ್ಚು ಮಾಡ್ಕೋತಾರೆ, ಉಳಿದದ್ದನ್ನ ಬ್ಯಾಂಕ್ ಹಾಕ್ಕೋತ್ತಾರೆ.. ಇನ್ನೆರಡುವರ್ಸ ಸಾರ್.. ಅಲ್ಲಿ ಚೆನ್ನಾಗಿ ಕೆಲ್ಸ ಮಾಡಿ, ಮತ್ತೆ ಶಿರಸಿಗೆ ಬಂದು ಒಂದು ಸಣ್ಣಹೋಟ್ಲು ಇಲ್ಲವೇ ಬೇಕ್ರಿ ಮಾಡ್ಕೊಂಡು ಇದ್‌ಬಿಡ್ತೀನಿ, ಉಳಿದ ದುಡ್ಡನ್ನ ಮಗ್ಳ ಮದ್ವೆಗೆ ಫಿಕ್ಸ್ ಮಾಡಿ ಲೈಫು ಸೆಟ್ಲು ಮಾಡ್ಕೋಬೇಕು', ಎಂಬ ಅನುಭವದ ಮಾತುಗಳು ನಾಯಕನನ್ನು ಪ್ರಬುದ್ಧವಾಗಿ ಆಲೋಚಿಸುವಂತೆ ಮಾಡಿತು. ಅವರ ವಿಮಾನ ಪ್ರಯಾಣ ಅಂತ್ಯಗೊಳ್ಳುತ್ತಾ ಬಂದಿತು. ಸಾವಿರಾರು ಎಕರೆ ಜಾಗದಲ್ಲಿ ವಿಶಾಲವಾಗಿದ್ದ ಏರ್‌ಪೋರ್ಟ್ ಅವರ ಕಣ್ಣಿಗೆ ಒಂದು ದೊಡ್ಡದ್ವೀಪವಂತೆ ಭಾಸವಾಯಿತು ಅಲ್ಲಿ ಎಮಿರೇಟ್ಸ್ ವಿಮಾನ ಸಾಲುಗಟ್ಟಿ ನಿಂತ ದ್ವೀಪಗಳು ಅವರಿಗೆ ಗೋಚರಿಸುತ್ತಿದ್ದವು.

ಅರಬ್‌ದೇಶ ಅದರ ಸುತ್ತಲಿನ ಜಗತ್ತು ಅವರಿಗೆ ಅಮೂರ್ತ ವಿಸ್ಮಯವೆಂಬಂತೆ ಭಾಸವಾಯಿತು. ಅರಬ್‌ದೇಶ ನೋಡಿ ಇದು ನಿಜವೋ ಭ್ರಮೆಯೋ ಎಂಬಂತೆ ಕೆಲವು ಕ್ಷಣ ಅವರಿಗೆ ಕಾಡತೊಡಗಿತು. ಅಲ್ಲಿನ ತಂಪು ಅವರು ಕನ್ನಡ ದೇಶವನ್ನು ಬಿಟ್ಟು ಅರಬ್ ದೇಶದಲ್ಲಿ ಇದ್ದೇನೆ ಎಂಬುದು ಅವರಿಗೆ ಸೂಚಿಸುತ್ತೆ. ಅರಬ್ ದೇಶದ ಜನ "ವಸುದೈವ ಕುಟುಂಬಕಂ" ಅನ್ನುವಂತಿತ್ತು. ಬಿಳಿ ವಸ್ತ್ರ ಹಾಕಿಕೊಂಡವರು ಕಾಣಿಸಿಕೊಂಡರು.

ಅಲ್ಲಿನ ಹೊಸ ಜಗತ್ತು ಅದ್ಭುತ ಒಳಮನಸ್ಸು ದುಬೈ ನೋಡಿ ಅಲ್ಲಿನ ನಗರ ವೈಭವವನ್ನು ನೋಡಿ ದಿಗ್ಭ್ರಮೆ ಮೂಡಿತು. ಅವರಿಗೆ ಸ್ವರ್ಗದಲ್ಲಿ ಇರುವ ಭಾವನೆ ಮೂಡಿತು. [6]"ರಾತ್ರಿ ನಾನು ಉಳಿದುಕೊಂಡಿದ್ದ ಫೈವ್‌ಸ್ಟಾರ್ ಹೋಟೇಲ್‌ನಲ್ಲಿ ಅರೇಬಿಯನ್ ನೈಟ್ಸ್, ಸೌತ್ ಮಸಾಲಾ, ಬೆಂಗಾಳಿ, ಬ್ಲ್ಯೂಮೂನ್, ಮಲಬಾರ್ ಬೇಬಿಸ್ ರೀತಿಯ ಪಬ್ ರೆಸ್ಟೋರೆಂಟ್‌ಗಳಿಗೆ ಸ್ನೇಹಿತರು ನನ್ನನ್ನು ಕರೆದುಕೊಂಡು ಹೋಗಿದ್ದರು. ಅಲ್ಲಿಯ ಆ ಬಣ್ಣದ ಜಗತ್ತಿನಲ್ಲಿ ನೋಡುಗರನ್ನು ಕಣ್‌ನೋಟದಲ್ಲೇ ಸೆಳೆಯುತ್ತಾ ತಮ್ಮ ಅರ್ಧಬಿಚ್ಚಿದ ಮೊಲೆಗಳನ್ನು ತೋರಿಸುತ್ತಾ, ಬೆಂಗಾಳಿ, ಹಿಂದಿ, ಮಲಯಾಳ ಮಸಾಲಾ ಹಾಡುಗಳಿಗೆ ನೃತ್ಯ ಮಾಡುತ್ತಿದ್ದ ಆ ಬಲಿತ ತೊಡೆಯ ಹುಡುಗಿಯರ ಮೈಮಾಟವನ್ನು ಆಸ್ವಾದಿಸುವ ಜನರ ನಡುವೆ, ನನ್ನ ಅಸಮಾಧಾನಕ್ಕೆ ಶೂನ್ಯ ಮನಸ್ಸಿಗೆ ಕಾರಣವಾಗಿದ್ದ ವ್ಯಕ್ತಿ ಆ ಬಣ್ಣದ ಬೆಳಕಿನಲ್ಲಿ ಕುಳಿತ್ತಿದ್ದು, ಅಸ್ಪಷ್ಟ ಕಲ್ಪನೆಯ ಆ ವ್ಯಕ್ತಿಯನ್ನೇ, ನನ್ನ ಮನಸ್ಸು ಹುಡುಕುತ್ತಿತ್ತು.

ಹೀಗೆ ಅವರು ಹುಡುಕುತ್ತಿದ್ದು ವ್ಯಕ್ತಿಯ ಮುಖ ಅವರಿಗೆ ಅಸ್ಪಷ್ಟವಾಗಿ ದೂರದಲ್ಲಿ ಕಾಣುತ್ತಿತ್ತು. ಆ ಮದನಾರಿಯರ ನೃತ್ಯವನ್ನು ನಡೆಯುತ್ತಿದ್ದರೂ ಯಾವುದೇ ಸಂತೋಷ ಪಡದೆ ಮೂಲೆಯಲ್ಲಿ ಗಂಭೀರವಾಗಿ ಮಧ್ಯ ಹೀರುತ್ತಾ ಕುಳಿತಿದ್ದ ವ್ಯಕ್ತಿಯ ವಯಸ್ಸು 50 ದಾಟಿರಬೇಕು. ಅವರ ಮುಖ ಪರಿಚಿತವಾದ ಮುಖದಂತೆ ಕಾಣಿಸಿತ್ತು. ತಾವು ಹುಡುಕಿ ಬಂದ ವ್ಯಕ್ತಿ ಅವರ ಕಣ್ಣಿಗೆ ಅನಾಥ ವ್ಯಕ್ತಿಯ ತರಹ. ಅಸ್ಪಷ್ಟವಾದ ಮುಖವನ್ನು ಸರಿಯಾಗಿ ನೋಡಬೇಕು ಎನ್ನುವಷ್ಟರಲ್ಲಿ ಕ್ಷಣಮಾತ್ರದಲ್ಲಿ ಮಾಯವಾದರು, ಅಲ್ಲಿರುವ ಸೆಕ್ಯೂರಿಟಿ ಗಾರ್ಡನ್ನು ಕೇಳಿದರೆ ಅವರಿಗೆ ಆ ವ್ಯಕ್ತಿಯ ಸುಳಿವು ಹತ್ತಲಿಲ್ಲ. ಯಾಕೋ ಏನೋ ಆ ಅಸ್ಪಷ್ಟ ಮುಖ ಯಾರದು ಎಂಬ ಪ್ರಶ್ನೆ ಕಾಡತೊಡಗಿತು.

ಆ ಸ್ಪಷ್ಟವಾಗಿ ಉಳಿದ ಅಪ್ಪನ ಚಹರೆ ಕಾಡುತ್ತಲೇ ಎರಡೂ ವರ್ಷಕ್ಕೊಮ್ಮೆ ಬರುತ್ತಿದ್ದ ಅಪ್ಪ ದುಬೈಯಿಂದ ಬಂದಾಗ ಆಟದ ಸಾಮಾನುಗಳು ಅಮ್ಮನಿಗೆ ಸೀರೆ ಬಳೆ ಕೊಟ್ಟು ಮತ್ತೆ ವಾರ ಕಳೆಯುವಷ್ಟರಲ್ಲಿ ಮತ್ತೆ ದುಬೈಗೆ ಹೋಗಿಬಿಡುತ್ತಿದ್ದ, ಆದರೆ ಪ್ರತಿಬಾರಿಯು ಬಂದಾಗ ದುಬೈಯನ್ನು ವರ್ಣರಂಜಿತವಾಗಿ ವಿವರಣೆ ಮಾಡುತ್ತಿದ್ದ.

ನಾನು ದುಬೈನಲ್ಲಿ ದೊಡ್ಡಮನೆಯಲ್ಲಿದ್ದೇನೆ ಅದು ಅರಮನೆಯಂತಿದೆ. ನಿಮ್ಮನ್ನು ಮುಂದಿನ ವರ್ಷ ಅಲ್ಲಿಗೆ ಕರೆಸಿಕೊಳ್ಳುತ್ತೇನೆ. ಅಲ್ಲಿಯೇ ಎಲ್ಲರೂ ಸಂತೋಷವಾಗಿ ಇರೋಣ ಎಂದು ಹೇಳುತ್ತಿದ್ದ.

[7]"ದುಬೈನಲ್ಲಿ ಅಗಲವಾದ ಅದ್ಭುತ ರೋಡುಗಳು, ಕಾರುಗಳು ಬಿಲ್ಡಿಂಗ್‌ಗಳು ಸಮುದ್ರ, ಮರುಭೂಮಿ, ದೊಡ್ಡದೊಡ್ಡ, ಫೈವ್‌ಸ್ಟಾರ್ ಹೋಟೆಲ್‌ಗಳು ಎಲ್ಲವನ್ನು ಕಣ್ಣಿಗೆ ಕಟ್ಟಿದಂತೆ ರಂಜನೀಯವಾಗಿ ವರ್ಣಿಸುತ್ತಿದ್ದ ಅಪ್ಪ, ಅವುಗಳ ಕಲ್ಪನೆಯ ಬೀಜವನ್ನು ನನ್ನಲ್ಲಿ ಚೆನ್ನಾಗಿ ನೆಟ್ಟುಬಿಟ್ಟಿದ್ದ ಹಾಗಾಗಿ ಅಪ್ಪನ ವರ್ಣನೆಯ ದುಬೈ ನಗರ ಆಗಲೇ ನನಗೆ ಸ್ವರ್ಗದ ತಾಣವೆಂಬಂತೆ ಕಲ್ಪನೆಯಾಗುತ್ತಿತ್ತು". ಬಂದಾಗಲೆಲ್ಲಾ ಹೇಳುತ್ತಿದ್ದ ಅಪ್ಪನನ್ನು ನಾನು ಯಾವಾಗಪ್ಪ ನಮ್ಮನ್ನು ಕರೆದುಕೊಂಡು ಹೋಗುವುದು ಎಂದು ಕೇಳಿದರೆ ನನಗೆ ನಂಬುವಂತಹ ಉತ್ತರಕೊಟ್ಟು ಸುಮ್ಮನಾಗಿ ಬಿಡುತ್ತಿದ್ದ. ಹೀಗೆ ಕೊನೆಕೊನೆಗೆ ಮನಸ್ಸಿನಲ್ಲಿ

ದುಬೈ ಅಸಹ್ಯವಾಗಿ ಬಿಟ್ಟಿತ್ತು. ಅಪ್ಪ ತರುತ್ತಿದ್ದ ಉಡುಗೊರೆ ನಿಧಾನವಾಗಿ ಅದರ ಮೇಲಿನ ಮೋಹವಿಲ್ಲದಂತಾಯಿತು ಬರುತ್ತಿದ್ದ, ಪಾರ್ಸೆಲ್‌ಗಳನ್ನು ಅಮ್ಮ ಒಲೆಗೆ ಹಾಕುತ್ತಿದ್ದಳು. ಹೀಗೆ ಅಮ್ಮ 15 ವರ್ಷಗಳವರೆಗೂ ಅಪ್ಪನ ನೆನಪು ಸ್ವಲ್ಪವು ಬರದ ರೀತಿ ನೋಡಿಕೊಂಡಳು.

ಅಮ್ಮನಿಗೆ ಅಪ್ಪನ ಮೇಲೆ ಇಷ್ಟೊಂದು ಕೋಪಬರಲು ಕಾರಣವಾದರೂ ಏನೂ ಇದಕ್ಕೆ ಅದಕ್ಕೆ ಅದಕ್ಕೆ ಅನೇಕ ಕಾರಣಗಳು ಇದ್ದವು. ಬದುಕಿ ಬಾಳಿದ ಊರಿನಲ್ಲೆ ನೆಲೆ ಕಾಣದೆ ಮಂಗಳೂರಿನ ಒಬ್ಬ ಏಜೆಂಟನ ಪರಿಚಯ ಮಾಡಿಕೊಂಡು ದುಬೈಗೆ ಸೇರಿದ. ಇದು ಹೆಂಡತಿ ಮಕ್ಕಳ ನಡುವೆ ಅನೇಕ ಕಂದಕವನ್ನು ಸೃಷ್ಟಿಸಿತು.

ಅಪ್ಪ ದುಬೈಯಿಂದ ಊರಿಗೆ ಬಂದಮೇಲೆ ಹತ್ತು ದಿನಗಳು ಕಳೆದರೂ ಮನೆಬಿಟ್ಟು ಹೊರಗೆ ಬರುತ್ತಿರಲಿಲ್ಲ ಅನುಮಾನಸ್ಪದ ವ್ಯಕ್ತಿಗಳ ಜೊತೆಯಲ್ಲಿ ಧೈರ್ಯವಾಗಿ ಮಾತನಾಡುತ್ತಿರಲಿಲ್ಲ. ಅಪ್ಪನ ಈ ವಿಚಿತ್ರ ಬದುಕಿನ ಹಿಂದಿನ ಸತ್ಯ ಏನೆಂಬುದು ಅಮ್ಮನಿಗೆ ಅರಿವಾಗಿತ್ತು. ಅಮ್ಮ ಎಲ್ಲವನ್ನು ತನ್ನ ಮನಸ್ಸಿನಲ್ಲಿ ನುಂಗಿಕೊಂಡು ನೋವುಪಡುತ್ತಿದ್ದಳು ಹೊರಗಡೆ ಪ್ರಪಂಚವನ್ನು ನೋಡುತ್ತಿದ್ದಂತೆ ಅಮ್ಮನ ಮನಸ್ಸಿಗೆ ಪ್ರಪಂಚ ಬಹಳಷ್ಟು ಅರಿವಾಯಿತು. ಅಪ್ಪನ ಅನಾಥ ಬದುಕನ್ನು ಅರಿತ ಕ್ಷಣದಿಂದ ಅವಳಲ್ಲಿ ಅನೇಕ ಬದಲಾವಣೆ ಕಾಣತೊಡಗಿತು. ಜನರು ಅಮ್ಮನ ಬಗ್ಗೆ ಅನೇಕ ರೀತಿಯಲ್ಲಿ ಮಾತನಾಡ ತೊಡಗಿದರು. ಅಮ್ಮ ದುಬೈನಲ್ಲಿದ್ದ ಅಪ್ಪನೂ ಸಂಪೂರ್ಣವಾಗಿ ಮರೆತಿದ್ದರೂ ಅಪ್ಪನನ್ನು ಕೂಡ ನಮ್ಮನ್ನು ಮರೆತುಬಿಟ್ಟಂತೆ ಕಂಡಿತು.

ಅಕಸ್ಮಾತ್ ನಿಮ್ಮ ಗಂಡ ಊರಿಗೆ ಬಂದರೆ ನಮಗೆ ತಿಳಿಸಿ ದುಬೈ ಅಂಡರ್‌ವರ್ಲ್ಡ್ ಜೊತೆ ಸೇರಿಕೊಂಡು ದೇಶದ ಕೆಲವು ಸಂಚುಗಳಲ್ಲಿ ಭಾಗಿಯಾಗಿದ್ದಾರೆ. ಇದು ದೊಡ್ಡ ಅಪರಾಧ ಎಂದು ಯಾರೋ ಹೇಳಿದ್ದರು. ಆಗ ಅಮ್ಮನಿಗೆ ಅರ್ಥವಾಯಿತು. ಅದಕ್ಕೆ ಅಪ್ಪ ಒಮ್ಮೆ ಮನೆಗೆ ಬಂದರೆ ಹೊರಗೆ ಹೋಗುತ್ತಿರಲಿಲ್ಲ. ಕತ್ತಲಲ್ಲಿ ಬಂದು ಕತ್ತಲೆಯಲ್ಲಿ ಊರುಬಿಡುತ್ತಿದ್ದ.

ಹೀಗೆ ಅಪ್ಪನ ಬದುಕು ದುಬೈ ಜೀವನಕ್ಕೆ ಸಂಪೂರ್ಣವಾಗಿ ಹೊಂದಿಕೊಂಡು ಬಿಟ್ಟಿತ್ತು. ಅಮ್ಮನಿಗೆ ಅಪ್ಪ ಭೂಗತ ಲೋಕಕ್ಕೆ ಸೇರಿರುವುದು ಇಷ್ಟವಿರಲಿಲ್ಲ. ಅಮ್ಮ ಅಪ್ಪನ ಸತ್ತ ಸುದ್ದಿ ಯಾಕೆ ಬರಲಿಲ್ಲ ಎಂದು ಕಾಯುತ್ತಿದ್ದಳು. ಇಂತಹ ಪರಿಸ್ಥಿತಿ ಯಾವ ಹೆಂಡತಿಗೂ ಬರಬಾರದು ಈ ರೀತಿಯ ಮಾತು ಒಬ್ಬ ತಾಯಿ ಹೇಳಬೇಕು ಎಂದರೆ ಅವರ ಮನಸ್ಸಿಗೆ ಎಂತಹ ಗಾಯವಾಗಿರಬೇಕು ಪ್ರೀತಿಸಿದ ಗಂಡ ಈ ತರಹ ಮಾಡಿದ ಎಂದರೆ ಆಕೆಯ ನೋವು ಎಂತಹುದು. ಈ ರೀತಿಯ ಎಲ್ಲಾ ಘಟನೆಗಳ ನಂತರ ಅಪ್ಪನನ್ನು ಸಂಪೂರ್ಣವಾಗಿ ಮರೆತು ಹೋಗಿದ್ದಳು. ಹೀಗೆ ಅನೇಕ ವರ್ಷಗಳಾದವು. ನಮ್ಮನ್ನು ಈ ರೀತಿಯ ಪರಿಸ್ಥಿತಿಯಲ್ಲಿ ನಮಗೆ ಒಳ್ಳೆಯ ವಿದ್ಯಾಭ್ಯಾಸ ಕೊಡಿಸಿ ದೊಡ್ಡವರಾಗಿ ಮಾಡಿದ್ದರು. ದುಬೈ ನೆಲಕ್ಕೆ ಕಾಲಿಟ್ಟಾಗಲೇ ಅವರಿಗೆ ದುಬೈ ನಗರದ ಸೌಂದರ್ಯ ಕಣ್ಣಿಗೆ ಅದ್ಭುತವಾಗಿ ಕಂಡಿತು. ಅಪ್ಪ ಚಿಕ್ಕಂದಿನಲ್ಲೆ ಹೇಳುತ್ತಿದ್ದ ದುಬೈನ ಕಲ್ಪನೆ ಈಗಲೂ ಅದಕ್ಕಿಂತ ಅದ್ಭುತವಾಗಿ ಸುಂದರವಾಗಿತ್ತು.

[8]"ಯಾರಾದರೂ 50ರ ಆಸುಪಾಸಿನ ವ್ಯಕ್ತಿ ಒಂಟಿಯಾಗಿ ಇದ್ದರೆ ಅವರ ಅಪ್ಪನನ್ನು ಕಾಣಲು ಬಯಸುತ್ತಿದ್ದರು. ಇವರು ಏಕಾಂತವಾಗಿ ವ್ಯಕ್ತಿ ಕುಳಿತುಕೊಂಡಿದ್ದಾರೆ. ಅಪ್ಪನ ಅಂತರಾಳದ ನೋವಿನ ಹುಡುಗಾಟದ ಪಯಣ ಮಾಡುತ್ತಿದ್ದ ನಾಯಕನಿಗೆ ಅನಾಥ ಮುಖ ಕೊನೆಗೂ ಸಿಗದೇ ಮರೀಚಿಕೆಯಾಯಿತು."ಇಂತಹ ದೊಡ್ಡನಗರದಲ್ಲಿ ಅಪ್ಪ ಎಲ್ಲಿರಬಹುದು..! ಹೇಗಿರಬಹುದು? ಮೊದಲೇ ಭೂಗತ ಜಗತ್ತಿನಲ್ಲಿದ್ದುದರಿಂದ ಯಾರಾದರೂ ಆತನನ್ನು ಕೊಂದಿರಬಹುದೇ?ದುಬೈನ ಯಾವುದಾದರೂ ಜೈಲಿನಲ್ಲಿ ಕೊಳೆಯುತ್ತಿರಬಹುದೇ? ಆತನ ಎರಡನೇ ಸಂಬಂಧದ ಹೆಂಡತಿ ಮಕ್ಕಳಾದರೂ ಹೇಗಿದ್ದಾರು? ಅವರಾದರೂ ಸಿಕ್ಕಿದರೆ ಅಪ್ಪನ ಬಗ್ಗೆ ವಿಚಾರಿಸಬಹುದಾಗಿತ್ತು.. ಅಂದುಕೊಂಡಂತೆ ಸತ್ತುಹೋಗಿದ್ದರೆ, ಅವರಿಗೆ ಸಮಾಧಾನ ವನ್ನಾದರೂ ಮಾಡಬಹುದಿತ್ತು".

ಹೀಗೆ ಅವರ ಮನಸ್ಸಿನಲ್ಲಿ ನಾನಾ ರೀತಿಯ ಚಿಂತೆಗಳು ಕಾಡತೊಡಗಿದ್ದವು ಇವರಿಗೆ ಇಂತಹ ದೊಡ್ಡ ದುಬೈ ನಗರದಲ್ಲಿ ಅಪ್ಪನನ್ನು ಹುಡುಕುವುದಾದರೆ, ಹಾಗೆ ಅಪ್ಪನಿಗೆ ಪಶ್ಚಾತ್ತಾಪ ಆಗಿ ನಮಗೆ ಹೇಗೆ ಮುಖ ತೋರಿಸುವುದು ಎಂದು ಹಿಂದೆ ಸರಿದಿದ್ದಾರೆ. ಹೇಗೆ ಅಪ್ಪನ ಮೇಲಿದ್ದ ಕೋಪ ಕಡಿಮೆಯಾಗುತ್ತಾ ಬರುತ್ತಾ ಇತ್ತು ಹಾಗೆಯೇ ಅಪ್ಪ ಎಲ್ಲಿಯಾದರೂ ಸಿಕ್ಕಿದರೆ ಅಪ್ಪನನ್ನು ನಮ್ಮ ದೇಶಕ್ಕೆ ಕರೆದುಕೊಂಡು ಹೋಗಬೇಕು? ಎಂದು ಹಾತೊರೆಯಿತು. ಈ ರೀತಿಯಲ್ಲಿ ಚಿಂತಿಸಿದ ಅವರಿಗೆ ಒಂದು ಕ್ಷಣ ಹೌದು ನಮ್ಮ ಅಪ್ಪ ನಮ್ಮನ್ನು ಮರೆತು ಇರುವುದರಲ್ಲಿ ಅರ್ಥ ಇದೆ. ಸಾವಿರಾರು ಮೈಲಿ ದೂರ ಬದುಕಲು ಬಂದಾಗ ಗೊತ್ತಿಲ್ಲದ ದೇಶದಲ್ಲಿ ನಮ್ಮವರು ಸಿಕ್ಕಿದರೆ ಸಾಕು ಎನ್ನುವಷ್ಟು ಹಾಹಾಕಾರ ಇರುತ್ತದೆ. ಮೊದಮೊದಲು ದುಡಿಯುವ ಹಂಬಲ ವೈಭವೋಪೇತ ದುಬೈ ಸೆಳೆದಿದ್ದರೂ ಬದುಕು ಕಟ್ಟಿಕೊಳ್ಳಲು ಸಿಕ್ಕ ಅವಕಾಶ ಹಿಡಿದಿರಬೇಕು ಎಂದು ಕ್ಷಮಿಸುವ ಮನಸ್ಸಾಯಿತು. ಮನಸಿಗೆ ತನ್ನನ್ನು ಪ್ರೀತಿಸುವ ನೊಂದಾಗ ಸಂತೈಸುವ ಇನ್ನೊಂದು ಹೆಣ್ಣಿನ ಸಂಗವನ್ನು ಅಪ್ಪ ಮಾಡಿರುವುದು ಆ ನೆಲದಲ್ಲಿ ನಿಂತು ನೋಡಿದಾಗ ನನಗೆ ಯಾವ ತಪ್ಪು ಕಾಣಲಿಲ್ಲ ಇಂತಹ ನಾಡಿನಲ್ಲಿದ್ದವನಿಗೆ ಇದು ಸಹಜವೇ ಸರಿ. ನಮ್ಮ ದೇಶದಲ್ಲಿ ನಿಂತು ನೋಡಿದಾಗ ಅಪ್ಪ ಮಾಡಿದ್ದು ತಪ್ಪಿನ ರೀತಿ ಕಾಣುತ್ತದೆ. ಅದಕ್ಕೆ ತಾನೇ ಅಮ್ಮ-ಅಪ್ಪನನ್ನು ವಿರೋಧಿಸುವುದು ಧಿಕ್ಕರಿಸುವುದು. ಆದರೆ ದುಬೈ ನೆಲದಲ್ಲಿ ನಿಂತು ಅಪ್ಪನ ಬದುಕಿನ ಕುರಿತು ಯೋಚಿಸಿದಾಗ ಅಪ್ಪನ ಬದುಕು ಏಕೆ ಹೀಗೆ ಆಯಿತು ಅನ್ನುವುದಕ್ಕೆ ಕರುಣೆ ಮೂಡುತ್ತದೆ.

ಈ ರೀತಿಯ ಯೋಚನೆ ಮಾಡುತ್ತಿದ್ದಾಗಲೇ ಅಪ್ಪನಿಗೆ ಎಷ್ಟು ನೋವಾಗಿರಬಾರದು. ಇಂತಹ ದೇಶದಲ್ಲಿ ನಮ್ಮನ್ನು ಬಿಟ್ಟು ಅವರು ಎಷ್ಟು ನೋವಿಗೆ ಒಳಗಾಗಿರಬಹುದು, ಯಾಕೆ ಅಪ್ಪನನ್ನು ಕ್ಷಮಿಸಬಾರದು ಎಂದು ಅಪ್ಪನ ನೋವನ್ನು ನೆನಪಿಸಿಕೊಂಡರೆ ಅಪ್ಪನ ಮೇಲೆ ಇನ್ನು ಪ್ರೀತಿ ಹೆಚ್ಚುತ್ತದೆ. ಅಪ್ಪ ಒಗಟಾಯಿಯೇ ನನ್ನನ್ನು ಅನಾಥನಾಗಿಯೇ ಆ ಬರಡು ನೆಲದಲ್ಲಿ ಕಾಡಿಬಿಟ್ಟ.

ಆ ಅನಾಥ ವ್ಯಕ್ತಿ ಅದೃಶ್ಯ ಲೋಕದ ಕೊನೆಗೆ ಒಂದು ದಿನ ತನ್ನ ಹೆಂಡತಿ ಮಕ್ಕಳಿಂದಲೇ ಅದೃಶ್ಯವಾಗುವಂತೆ ಮಾಡಿದ ದುರಂತವನ್ನು ಅಪ್ಪನ ಟೆಲಿಗ್ರಾಮ್ ಕಥೆಯಲ್ಲಿ ಕಥೆಗಾರ ಬಿಚ್ಚಿಟ್ಟಿದ್ದು, ಭಯಭೀತಿ ಹುಟ್ಟಿಸುವ ದುಬೈ ನಗರದ ಭೀಭತ್ಸ ಬದುಕಿನ

ಚಿತ್ರಣವಾಗಿದೆ. ತಮ್ಮನ್ನು ಬಿಟ್ಟುಹೋದ ಅಪ್ಪನ ಬಗ್ಗೆ ಇದ್ದ ದ್ವೇಷ ಮಗ ತಾನು ಒಂದು ದಿನ ಅಪ್ಪನ ಹುಡುಕುತ್ತ ದುಬೈಗೆ ಬಂದು ಅಲ್ಲಿ ಪಡೆದ ಅನುಭವದಿಂದ ಅಪ್ಪನನ್ನು ಕ್ಷಮಿಸುವ ಮನಸ್ಸು ಮಾಡುತ್ತಾನೆ.

ಅಲ್ಲಿ ಅಪ್ಪನನ್ನು ಕ್ಷಮಿಸಿದ ಮಗ ಇನ್ನೊಂದು ಕಥೆ ಅಪ್ಪನ ಬಗ್ಗೆ ಅನುಮಾನ ಪಡುವ ಕಥೆಯೇ ಇನ್ನೊಂದು ಪೀಪಿಂಗ್ ಟಾಮ್ ಕಥೆಯಲ್ಲಿ ಡಾ॥ಮಲ್ಲನಗೌಡಪಾಟೀಲ ತನ್ನ ಒಂಟಿತನದ ಬದುಕಿನಲ್ಲಿ ಶಿಸ್ತು ಸಂಯಮಕ್ಕೆ ಹೆಸರಾಗಿದ್ದು, ಮುಂದೆ ತನ್ನ ಮಕ್ಕಳ ಕಣ್ಣಿನ ಎದುರಿಗೆ ಬೆತ್ತಲಾಗುವ ಪ್ರಸಂಗ ಬರುತ್ತದೆ. ಮಲ್ಲನಗೌಡರು ಸಸ್ಯಶಾಸ್ತ್ರ ವಿಭಾಗದಲ್ಲಿ ಒಂದು ಒಳ್ಳೆಯ ಹೆಸರು ಮಾಡಿದ ವ್ಯಕ್ತಿ. ಹೆಂಡತಿ ಅನುಸೂಯಮ್ಮ ಅವರು ತೀರಿಕೊಂಡಿದ್ದರು. ಡಾ॥ಪಾಟೀಲರು ತಮ್ಮ ಕೊನೆಯ ಕಾಲದಲ್ಲಿ ಮಕ್ಕಳು ಸಹ ಅಮೆರಿಕ, ಆಸ್ಟ್ರೇಲಿಯಾದಲ್ಲಿ ನೆಲಸಿದ್ದರು. ಡಾ॥ಪಾಟೀಲರನ್ನು ತನ್ನ ತಂಗಿ ನೋಡಿಕೊಳ್ಳುತ್ತಿದ್ದಳು. ಅವರಿಗೆ ಅವರ ಅಣ್ಣ ಎಂದರೆ ಬಹಳ ಪ್ರೀತಿ. ಹೀಗಿದ್ದ ಸಂದರ್ಭದಲ್ಲಿ ಒಂದು ಅಹಿತಕರ ಘಟನೆ ನಡೆದುಬಿಟ್ಟಿತು. ಇನ್ನೂ ಕೆಲವು ದಿನದಲ್ಲಿ ಪ್ರಿನ್ಸಿಪಾಲರಾಗಿ ನಿವೃತ್ತರಾಗಬೇಕು ಎನ್ನುವಷ್ಟರಲ್ಲಿ ಒಂದು ಅಪವಾದ ಅವರ ಮೇಲೆ ಬಂದಿತ್ತು. ಅದು ಎಷ್ಟರಮಟ್ಟಿಗೆ ಎಲ್ಲರೂ ನಂಬಿದ್ದಾರೆ ಎಂದರೆ ಪ್ರತಿಯೊಂದು ಮಾತಿನಲ್ಲೂ ತನ್ನ ಸಹೋದ್ಯೋಗಿಗಳಿಂದ ಹಿಡಿದು ತನ್ನ ಮಕ್ಕಳವರೆಗೂ ಕೊಂಕು ನುಡಿಗಳನ್ನು ಕೇಳಿ ಪಾಟೀಲರ ಕಣ್ಣೀರಿಗೆ ಕಾರಣವಾದವು. ಅವರ ಮನಸ್ಸಿನಲ್ಲಿ ಇರುವ ವಿಷಯವನ್ನು ಯಾರ ಹತ್ತಿರ ಕೂಡ ಸಹ ಹೇಳಲು ಸಾಧ್ಯವಾಗದಷ್ಟು ನನ್ನ ಸ್ವಂತ ಮಕ್ಕಳು ಸಹ ಅವರ ದುಃಖಗಳನ್ನು ಕೇಳದೆ ಜನಗಳು ಹೇಳಿದ ಮಾತಿಗೆ ಬೆಲೆಕೊಡುತ್ತಿದ್ದರು. ಅವರ ಜೊತೆಯಲ್ಲಿ ಅವರ ಯೋಗಕ್ಷೇಮಕ್ಕೆ ಇದ್ದವರು ಅಂದರೆ ಅವರ ತಂಗಿ ಸಂಧ್ಯಾ ಮಾತ್ರ ಪಾಟೀಲರ ಬಗ್ಗೆ ಜನರು, ಸಹೋದ್ಯೋಗಿಗಳು, ಸಂಬಂಧಗಳು ಎಲ್ಲರೂ ಅವರವರ ಭಾವಕ್ಕೆ ತಕ್ಕಂತೆ ಮಾತನಾಡುತ್ತಿದ್ದರು. ಅಪ್ಪನ ಅಪವಾದದ ಮಾತುಗಳು ದೂರದ ಅಮೆರಿಕಾ, ಆಸ್ಟ್ರೇಲಿಯಾದಲ್ಲಿದ್ದ ತಮ್ಮ ಮಕ್ಕಳಿಗೆ ಜನರ ಮಾತುಗಳು ದೇಶದಾಟಿ ಅವರ ಕಿವಿ ಮುಚ್ಚಿದ್ದವು.

[9]'ಛೇ.. ಅಪ್ಪಯ್ಯಂಗೆ ಈ ವಯಸ್ಸಿನಲ್ಲಿ ಯಾಕೆ ಇದೆಲ್ಲಾ? ಇಷ್ಟುದಿನ ಅವ್ವ ಇದ್ಲು... ಎಲ್ಲಾನೂ ನೋಡ್ಕಂತಿದ್ಲು ... ಈಗ ಅವ್ಳ ಇಲ್ಲಿ ಅಷ್ಟೊಂದು ಆಸೆ ಇದ್ದಿದ್ರೆ ಇನ್ನೊಂದು ಲಗ್ನ ಆಗ್‌ತೀನಿ ಅಂತ ಒಂದು ಮಾತ್ ನಮ್ಮತ್ರ ಹೇಳಿದ್ರ ನಾವೇನು ಬ್ಯಾಡ ಅಂತಿದ್ವಾ? ಅಮೇರಿಕದಂತ ದೇಶದಾಗಾ ತೊಂಭತ್ತು ವರ್ಸ ಆದ್ರೂ ಲಗ್ನ ಆಗ್ತಾರೆ... ಅಂತದ್ರೊಳಗೆ ಅಪ್ಪಯ್ಯಂಗೆ ಇನ್ನೂ ಅರವತ್ತು ಕೂಡ ಆಗಿಲ್ಲ. ಇನ್ನೊಂದು ಲಗ್ನ ಬೇಕಾದ್ರ ಆಗ್ಲಿ ನಾನೇ ನಿಂತು ಅಪ್ಪಯ್ಯನ ಲಗ್ನ ಮಾಡ್ತೀನಿ.. ಅದನ್‌ಬಿಟ್ಟು ಹಿಂಗೆಲ್ಲಾ ಮಾಡಿ ನಮ್ಗಾ ಊರ್‌ಕಡಿ ಮುಖ ಇಟ್ಕಂಡು ಬರ್‍ಲೆ ಇರಂಗ ಮಾಡಿದ್ರೆ ಹೆಂಗ?' ಈ ರೀತಿಯ ಮಾತುಗಳು ಪಾಟೀಲರ ಮನಸ್ಸಿಗೆ ನೋವು ಉಂಟುಮಾಡಿತ್ತು. ಕಾಲೇಜಿನಲ್ಲಿ ಶಮಂತಿನಿ ಪಾಟೀಲರ ಮೇಲೆ ಮಾಡಿದ ಲೈಂಗಿಕ ಆಪಾದನೆ ಇದು ಸರಿಯೋ ತಪ್ಪೋ ಎಂಬ ವಿಚಾರಣೆ ಯಾರು ಮಾಡದೆ ಅವರನ್ನು ಅಪರಾಧಿಯಾಗಿ ಮಾಡಿದ್ದರೂ ಇದರಿಂದ ಪಾಟೀಲರು ಒಂಟಿಯಾಗಿ ಮೌನದಲ್ಲಿ ತಮ್ಮ ರೂಮನ್ನು ಬಿಟ್ಟು ಬರುತ್ತಿರಲಿಲ್ಲ. ಜೊತೆಗೆ ಕೆಲಸದಿಂದ ಹೊರಗೆ ಕಳುಹಿಸಿದ್ದ ಅವರಿಗೆ

ಇನ್ನೊಂದು ಹೊಡೆತ ಆದಂತೆಯಾಯಿತು. ಇದರ ಬಗ್ಗೆ ಎಲ್ಲರೂ ಮಾತನಾಡಿದ್ದರು. ಆದರೆ ತನ್ನ ಜೊತೆ ರಕ್ತ ಹಂಚಿಕೊಂಡಿದ್ದ ತಂಗಿ ಮಾತ್ರ ಇದನ್ನು ನಂಬಲು ಸಾಧ್ಯವಿರಲಿಲ್ಲ.

[10]"ನಂಗನಿಸಿದ ಪ್ರಕಾರ ಅಪ್ಪಯ್ಯಂಗೆ ಪೀಪಿಂಗ್‌ಟಾಮ್ ಪ್ರಾಬ್ಲೆಮ್ಮು ಅಂತ ಅನ್ಸುತ್ತೆ".

ಅಂತ ಇಬ್ಬರೂ ಮಾತನಾಡಿಕೊಳ್ಳುತ್ತ ಇದು ಒಂದು ತರಹ ಮಾನಸಿಕ ಖಾಯಿಲೆ. ಇದು ಒಂದುತರಹ ವಿಕೃತ ಕಾಮವನ್ನು ಫ್ಯಾರಾಫೀಲಿಯಾ ಅಂತಾ ಹೇಳುತ್ತಾರೆ. ಇದು ಲೈಂಗಿಕ ಸಂತೃಪ್ತಿ ಸೆಕ್ಸುಯಲ್ ಸ್ಯಾಟಿಸ್‌ಫ್ಯಾಕ್ಷನ್ ಸರಿಯಾಗಿ ಸಿಗದೇ ಇದ್ದವು, ಈ ಖಾಯಿಲೆಯಲ್ಲಿ ಇರುತ್ತಾರೆ. ಇದೇ ಈ ರೀತಿಯ ಖಾಯಿಲೆ ಇರಬೇಕು. ತನ್ನ ಆಸೆಯನ್ನು ತೀರಿಸಿಕೊಳ್ಳಲು ಹೆಂಗಸರು ಹುಡುಗಿಯರನ್ನು ಕದ್ದು ಮುಚ್ಚಿ ಅವರು ಬಟ್ಟೆಬಿಚ್ಚುವುದನ್ನು ನೋಡಿ ಖುಷಿಪಡುತ್ತಾರೆ. ಈ ರೀತಿಯ ಮನಸ್ಸಿನ ಆಸೆಯನ್ನು ತೀರಿಸಿಕೊಳ್ಳುವುದಕ್ಕೆ ಪೀಪಿಂಗ್‌ಟಾಮ್ ಎಂದು ಹೇಳುತ್ತಾರೆ. ಅಂತ ತನ್ನ ತಂಗಿಯ ಹತ್ತಿರ ಹೇಳಕೊಳ್ಳುತ್ತಾನೆ.

ಹೀಗೆ ಅವರು ತಮ್ಮ ತಂದೆಯನ್ನು ಇಲ್ಲೇ ಇಟ್ಟುಕೊಂಡು ಬಿಡೋಣ ಇಲ್ಲಿನ ಡಾಕ್ಟ್ರ ಹತ್ತಿರ ತೋರಿಸೋಣ ಆಮೇಲೆ ಇಲ್ಲೆ ಮದುವೆ ಮಾಡೋಣ ವಿಧವೆಯೊ, ಡಿವೋರ್ಸಿಯೋ ಅಥವಾ ವಯಸ್ಸಾದ ಇನ್ನೂ ಮದುವೆಯಾಗದೆ ಇರುವ ಹುಡುಗಿಯನ್ನು ನೋಡಿ ಮದುವೆ ಮಾಡಿ ಬಿಡೋಣ ಅಂತ ಹೇಳುತ್ತಾ ಅಪ್ಪನಿಗೆ ಸ್ವಲ್ಪವಾದರೂ ನಾಚ್ಕೆ ಆಗ್ಬೇಕು. ಈ ವಯಸ್ಸಿನಲ್ಲಿ ಅವರಿಗೆ ಬೇಕಿತ್ತಾ ಮಕ್ಕಳಿಗೆ ಇಷ್ಟೊಂದು ನೋವು ಕೊಡತ್ತೀರಲ್ಲ ಅಂತ ಬೈಯ್ದುಕೊಳ್ಳುತ್ತಾರೆ. ಆದರೆ ಅಪ್ಪನ ಮನಸ್ಸನ್ನು ಅವರು ಅರ್ಥಮಾಡಿಕೊಳ್ಳುವ ಗೋಜಿಗೆ ಹೋಗುವುದಿಲ್ಲ. ಐದಾರು ತಾಸುಗಳವರೆಗೆ ಈಗ ಸಂಪೂರ್ಣವಾಗಿ ಮೌನಕ್ಕೆ ಶರಣಾಗಿಬಿಟ್ಟಿದ್ದರು. ನಿಜವಾದ ಸತ್ಯ ಏನು? ಎಂಬುದನ್ನು ಯಾರು ವಿಚಾರ ಮಾಡುವ ತಿಳಿಯುವ ಸಾಹಸ. ಶಮಂತಿನಿ ಮತ್ತು ಪಾಟೀಲರಿಗೆ ಮಾತ್ರ ತಿಳಿದಿದ್ದ ಮಾತ್ರ ತಿಳಿದಿದ್ದೆ ಅಕಸ್ಮಾತ್ ಸತ್ಯ ಹೇಳಿದರೂ ಒಪ್ಪಿಕೊಳ್ಳುವ ಮನಸ್ಸುಗಳು ಇಲ್ಲ ಎಂಬುದು ಮನದಿಟ್ಟಾಯಿತು. ಮೌನಕ್ಕಿಂತ ದೊಡ್ಡ ಹೋರಾಟ ಇಲ್ಲ ಅಂತ ಸುಮ್ಮನಾಗಿಬಿಟ್ಟರು. ಆದರೆ ಅವರ ಮೌನ ಒಂದು ಸಾರಿ ದೊಡ್ಡ ಆಲದ ಮರವಾಗಿ ಬೆಳೆಯಲಿಕ್ಕೆ ಕಾರಣವಾಯಿತು.

[11] 'ಹಿರಿಯ ಪ್ರಾಧ್ಯಾಪಕರಿಂದ ಸಹ-ಪ್ರಾಧ್ಯಾಪಕಿಯ ಮೇಲೆ ಲೈಂಗಿಕ ಹಲ್ಲೆ', ಎಂಬ ದೊಡ್ಡ ಅಕ್ಷರಗಳಲ್ಲಿ ಪತ್ರಿಕೆಗಳಲ್ಲಿ ಬಂದಿತು.

ಅಪ್ಪನ ಜೊತೆಯಲ್ಲಿ ಮಕ್ಕಳು ತಿಂಗಳುಗಟ್ಟಲೆ ಮಾತನಾಡುವುದನ್ನು ಬಿಟ್ಟಿದ್ದರು. ಆದರೆ ಪಾಟೀಲರ ತಂಗಿ ಮಲ್ಲಮ್ಮ ಮಾತ್ರ ಅಣ್ಣನ ಬಗ್ಗೆ ಈ ರೀತಿ ಮಾತನಾಡುತ್ತಿದ್ದುನ್ನು ಕಂಡು ಬೇರೆ ರೀತಿಯ ಚಿಂತನೆಗೆ ಒಳಗಾಗಿದ್ದಳು.

ಬೆಟಗೇರಿಯಲ್ಲಿದ್ದ ಚಿಗವ್ವ ಸಿದ್ಧಲಿಂಗಮ್ಮಜ್ಜಿ ಘಟನೆಯನ್ನು ಹೇಳಿರುವುದು ನೆನಪಿಗೆ ಬಂದಿತು ಸಿದ್ಧಲಿಂಗಮ್ಮಜ್ಜಿಗೆ ತನ್ನ ದೊಡ್ಡಮ್ಮ ಹೇಳಿರುವುದು ನೆನಪಿಗೆ ಬಂದಿತ್ತಂತೆ

ತೊಂಭತ್ತು ವರ್ಷದ ಹಿಂದೆ ನಾಲ್ಕೈದು ತಲೆಮಾರುಗಳ ಹಿಂದೆ ನಡೆದ ಘಟನೆ. ಹುಬ್ಬಳ್ಳಿಗೆ ಬರುವ ಮುಂಚೆ ರಾಣಿಬೆನ್ನೂರಿನಲ್ಲಿ ಕೆಲಸ ಮಾಡುತ್ತಾ ಇದ್ದ ಆ ಸಮಯದಲ್ಲಿ ಸಾವ್ಕಾರ ಚೆನ್ನಬಸಪ್ಪನವರ ಮನೆಯಲ್ಲಿ ಕೆಲಸಕ್ಕೆ ಸೇರಿದ್ದರು ಚಿಕ್ಕ ವಯಸ್ಸಿನಿಂದ ಅಲ್ಲಿದ್ದರು, ಒಂದುದಿನ ಅವರ ಮನೆಯ ಹೆಂಗಸರು ಸ್ನಾನ ಮಾಡುವುದನ್ನು ಕದ್ದುಮುಚ್ಚಿ ನೋಡುತ್ತಿದ್ದಾಗ ಅವರು ಸಿಕ್ಕಿಹಾಕಿಕೊಂಡು ಅಲ್ಲಿಂದ ಹೊರ ಹಾಕಿದರು ಹಾಗೂ ಊರು ಬಿಟ್ಟು ರಾಣಿಬೆನ್ನೂರನ್ನು ಬಿಟ್ಟು ಹುಬ್ಬಳ್ಳಿಗೆ ಸೇರಿಕೊಳ್ಳುತ್ತಾನೆ. ಆದ್ದರಿಂದ ಈ ಖಯಾಲಿ ನಮ್ಮ ಅಣ್ಣನಿಗೂ ಇರಬಹುದು ಎಂದುಕೊಳ್ಳುತ್ತಾರೆ.

ಹಾಗೆ ಮಗನಿಗೆ ಹೇಳಿದಾಗ ಅಣ್ಣನನ್ನು ನೋಡಿದಾಗಲೆಲ್ಲಾ ಮಲ್ಲಮ್ಮನಿಗೆ ಅಜ್ಜನ ಈ ಖಾಯಿಲೆ ಈತನಿಗೂ ಅಂಟಿರುವುದನ್ನು ಕಂಡುತುಂಬ ಬೇಸರಪಡುತ್ತಾಳೆ. ಹಾಗಂತ ಅಣ್ಣನೊಂದಿಗೆ ಈ ವಿಷಯವನ್ನು ಹಂಚಿಕೊಳ್ಳುವ ಧೈರ್ಯವಿರಲಿಲ್ಲ. ಖಾಯಿಲೆ ಇದೆ ಅವರನ್ನು ಅಮೆರಿಕದ ವೈದ್ಯರ ಹತ್ತಿರ ಕರೆಸಿಕೊಂಡು, ಔಷಧ ಕೊಡಿಸಬೇಕು ಹಾಗೆಯೇ ಅಪ್ಪನ ಪ್ರೊಫೈಲನ್ನು ಒಬ್ಬ ಭಾರತೀಯ ಮೂಲದ ಹೆಂಗಸು ಇಷ್ಟಪಟ್ಟಿದ್ದಾಳೆ. ಅವರಿಗೆ ಇನ್ನೊಂದು ಮದುವೆ ಮಾಡಿಸೋಣ ಇಲ್ಲಿಯೇ ಇರಲಿ. ಅಪ್ಪ ಇಷ್ಟು ವರ್ಷ ಸಾಕಿ ಸಲುಹಿ ವಿದ್ಯೆ ಬುದ್ಧಿ ಕೊಟ್ಟು ಬೆಳೆಸಿದ ಅವನ ಋಣವನ್ನು ಈ ಮೂಲಕ ತೀರಿಸಿಕೊಳ್ಳುತ್ತೇನೆ ಎಂದು ರವಿ ತೀರ್ಮಾನಿಸುತ್ತಾನೆ.

ಆದರೆ, ಈ ಎಲ್ಲಾ ಘಟನೆಯು ಹಿಂದೆ ನಡೆದ ನಿಜವಾದ ಸತ್ಯವೆಂದರೆ ಶಮಂತಿನಿ ಅಯ್ಯರ್ ಸಸ್ಯಶಾಸ್ತ್ರದ ಒಂದು ವಿಷಯದ ಮೇಲೆ ಮೂರ್‍ನಾಲ್ಕು ವರ್ಷದಿಂದ ಸಂಶೋಧನೆ ಮಾಡುತ್ತಿದ್ದಳು. ಅವಳಿಗೆ ಪಿ.ಹೆಚ್‌ಡಿ ಮಾಡಿಕೊಂಡರೆ ಮುಂದೆ ಪ್ರಮೋಷನ್ ಸಂಬಳಕ್ಕೆ ಸಹಾಯವಾಗುತ್ತದೆ ಎಂಬುದು ಅವಳ ದೂರಾಲೋಚನೆ ಶಮಂತಿನಿಯ ಮಾರ್ಗದರ್ಶಕರು ಡಾ॥ಪಾಟೀಲ್‌ರು ಮೊದಲೇ ಸಸ್ಯಶಾಸ್ತ್ರದಲ್ಲಿ ಮಾವತ್ತಕ್ಕೂ ಹೆಚ್ಚು ಸಂಶೋಧನೆ ಮಾರ್ಗದರ್ಶನ ಮಾಡಿದ್ದವರು ಜೊತೆಗೆ ಶಿಸ್ತಿನ ಮನುಷ್ಯರಾಗಿದ್ದವರು. ಶಮಂತಳ ಸಂಶೋಧನೆ ಗುಣಮಟ್ಟ ಸರಿಯಿಲ್ಲ ಎಂದು ಮೂರ್‍ನಾಲ್ಕು ಸಾರಿ ರಿಜೆಕ್ಟ್ ಮಾಡಿದ್ದರು. ಇದು ಬಹಳ ಬೇಸರ ಸಂಗತಿಯಾಗಿತ್ತು. ಡಾ॥ಪಾಟೀಲ್ ಶಿಸ್ತು ಸಂಯಮ ಸಂಶೋಧನಾ ಪ್ರವೃತ್ತಿ ಅವಳ ಬೆಳವಣಿಗೆಯ ದಾರಿಗೆ ಮುಳುವಾಗಿದ್ದವು.

[12]"ಒಂದು ದಿನ ಸಿಟ್ಟಿನಿಂದ ಸರ್, ಹೀಗೆ ನೀವು ನನ್ನ ಪೇಪರ್‌ಗಳನ್ನು ರಿಜೆಕ್ಟ್ ಮಾಡ್ತಾ ಇರೀ.. .. ನಿಮ್ಮನ್ನು ಕಾಲೇಜಿನಿಂದ ಓಡಿಸಲಿಲ್ಲ ಅಂದ್ರೆ ನಾನು ನಮ್ಮಪ್ಪನ ಮಗಳೇ ಅಲ್ಲಾ ಎಂದು ಹೆದರಿಸುವಂತೆ ಡಾ॥ಪಾಟೀಲರ ಕೋಣೆಯಲ್ಲಿ ಅಬ್ಬರಿಸಿದ್ದಳು". ಶಮಂತಿನಿ ಮಾತು ಅಂದು ಯಾರಿಗೂ ಕೇಳಿಸಿರಲಿಲ್ಲ. ಈ ಸತ್ಯ ಯಾರಿಗೂ ಗೊತ್ತಾಗಲಿಲ್ಲ.

ಅಮೆರಿಕಾದಲ್ಲಿ ನೆಲೆನಿಂತ ಮಗ ರವಿ ಪಾಟೀಲ್ ಅಮೆರಿಕಾದ ನೆಲೆ ಸಂಸ್ಕೃತಿಯಂತೆ ಅಂತರಜಾಲದ ಮ್ಯಾಟ್ರಿಮೋನಿಯಲ್ಲಿ ಹೆಣ್ಣನ್ನು ಹುಡುಕಿ ತನ್ನ ಅಪ್ಪನಿಗೆ ಹತ್ತಿರುವ ರೋಗವನ್ನು ದೂರ ಮಾಡಿಸುವ ಪ್ರಯತ್ನಮಾಡಿದ್ದಾರೆ. ಆಸ್ಟ್ರೇಲಿಯಾದಲ್ಲಿ ಇರುವ ಮಗಳು 'ಫೀಪಿಂಗ್‌ಟಾಮ್' ಖಾಯಿಲೆಯ ಬಗ್ಗೆ ಹೆಚ್ಚು ತಿಳಿದುಕೊಳ್ಳಲು ಪ್ರಯತ್ನಿಸುತ್ತಾಳೆ.

ಅಮೆರಿಕಾದ ರವಿ ಆಸ್ಟ್ರೇಲಿಯಾದ ಸಂಧ್ಯಾ ಆ ನೆಲದ ಸಂಸ್ಕೃತಿಯಿಂದ ಆಲೋಚನೆ ಮಾಡಿದರೇ ಹೊರತು ಭಾರತೀಯ ಮಕ್ಕಳಂತೆ ಏಕಾಂಗಿಯಾಗಿ ಕಂಗೆಟ್ಟ ಅಪ್ಪನ ಮನಸ್ಥಿತಿಯ ಅರಿಯಲು ಅಪ್ಪನ ಜೊತೆ ಕುಳಿತು ನಾಲ್ಕು ಗಳಿಗೆ ಕಳೆಯಲು ಸಿದ್ಧ ಇರದ ಮಕ್ಕಳು ಸಂಬಂಧಗಳ ಬೆಲೆ ಅರಿಯದ ವಿದೇಶಿ ನೆಲೆ ಮತ್ತು ಭಾರತೀಯತೆಯ ಸಂಬಂಧಗಳ ಬೆಲೆ ತಿಳಿಯದ ಕಾಲ ಬದಲಾದಂತೆ ಸಂಬಂಧದ ಬೆಲೆಗಳು ಕಳಚಿ ಭಾರತೀಯ ಸಂಸ್ಕೃತಿಯನ್ನು ಮರೆತು ಆ ದೇಶದ ಸಂಸ್ಕೃತಿಗೆ ಬೆಲೆಕೊಡುವ ಮಕ್ಕಳು ಜನರ ಮಾತಿಗೆ ಹೋದರು ಅವರ ಅಪ್ಪನಿಗೆ ಇನ್ನೊಂದು ಮದುವೆ ಮಾಡುವ ಹುಡುಗಿ ಹುಡುಕಲು ಡಾಕ್ಟರ್ ಸಂಪರ್ಕಿಸೋಣ, ಇಂಟರ್‌ನೆಟ್ ಅಂತರ್ಜಾಲ, ಮ್ಯಾಟ್ರಿಮೊನಿಯಾ ಈ ರೀತಿಯಲ್ಲಿ ಹುಡುಕುವುದಕ್ಕೆ ಕೊಟ್ಟ ಸಮಯವನ್ನು ತನ್ನ ತಂದೆಯ ಜೊತೆಗೆ ಕೆಲವು ಗಳಿಗೆಯನ್ನು ಮೀಸಲಿಟ್ಟಿದ್ದರೆ ಡಾ॥ಪಾಟೀಲರಿಗೆ ಖುಷಿಯಾಗುತ್ತಿತ್ತು.. ನಾವು ನಿಮ್ಮ ಜೊತೆ ಇದ್ದೇವೆಎಂಬ ಮಾತು ಅವರ ಮನಸ್ಸಿಗೆ ಸಮಾಧಾನವಾಗುತ್ತಿತ್ತು ಹಾಗೂ ಅವರು ಎಲ್ಲ ಸತ್ಯವನ್ನು ಹೇಳುತ್ತಿದ್ದರು. ಪಾಟೀಲರು ಮಕ್ಕಳೆದುರು ಮಗುವಾಗಿ ಬಿಡುತ್ತಿದ್ದರು. ಆದರೆ ಈ ಮಕ್ಕಳು ಈ ರೀತಿಯ ಕೆಲಸ ಮಾಡಲಿಲ್ಲ.

ಜೀವ ಇರುವ ವ್ಯಕ್ತಿಗಿಂತ ಜೀವ ಇಲ್ಲದ ಆ ಅಂತರ್ಜಾಲ ಇಂಟರ್‌ನೆಟ್‌ಗಳಿಗೆ ಬೆಲೆಕೊಟ್ಟರು ಎಂಬುದು ಎಷ್ಟುಸರಿ. ಜೀವಕೊಟ್ಟ ವ್ಯಕ್ತಿ ನಂಬಲಿಲ್ಲ ಬೆಲೆಕೊಡಲಿಲ್ಲ. ಜೀವ ಇಲ್ಲದ ನಿರ್ಜೀವ ವಸ್ತುವಿಗೆ ಬೆಲೆಕೊಟ್ಟ ಮಕ್ಕಳು. ಬೆಲೆ ಅರಿಯದ ವಿದೇಶ ನೆಲೆ ಮತ್ತು ಭಾರತೀಯತೆಯ ಸಂಬಂಧಗಳ ಅಂತಃಸತ್ವವನ್ನು ಬಹಳ ಸ್ವಾರಸ್ಯಪೂರ್ಣವಾಗಿ ಕಥೆ ಎತ್ತಿ ಹೇಳುತ್ತಾ ಇಂಟರ್‌ನೆಟ್ ಬಗ್ಗೆ ಆಲೋಚಿಸುವ ಮಕ್ಕಳು ಅಪ್ಪನ ಅಂತರಾಳದೊಂದಿಗೆ ನೆಟ್‌ವರ್ಕ್ ಬೆಳೆಸಿಕೊಳ್ಳಲೇ ಇಲ್ಲ ಎಂಬ ದುರಂತವನ್ನು ತನ್ನ ಕತೆಯಲ್ಲಿ ಫಕೀರ ಅವರು ಮನಮಿಡಿಯುವಂತೆ ಕಟ್ಟಿಕೊಟ್ಟಿದ್ದಾರೆ.

ಹಳ್ಳಿಯಿಂದ ಬಂದು ನಗರದಲ್ಲಿ ಇದ್ದು ಅಲ್ಲಿಯ ಜನರನ್ನು ನೋಡಿ ಇಲ್ಲಿಯೇ ಎಲ್ಲಾ ತಿಂಡಿಗಳನ್ನು ಕಲಿತು ನಗರ ಜೀವನವನ್ನು ಹಳ್ಳಿಗೆ ಕೊಡಬೇಕು ಎಂಬುದು ಇನ್ನೊಂದು ಕತೆ. ಕೋಪಿವಾಡ ಕತೆಯಲ್ಲಿ ಬಾಲಕಾರ್ಮಿಕ ವಿರೋಧ ಕಾನೂನು ರೂಪಿತವಾಗಿದ್ದು ಕೂಡ ಸಮಾಜದ ಎಲ್ಲಾ ವಲಯಗಳಲ್ಲಿ ಪುಟ್ಟ ಮುಗ್ಧ ದೇಹಗಳ ಶ್ರಮದಿಂದ ನಲುಗುತ್ತಿವೆ. ಈ ಸಮಾಜದಲ್ಲಿ ಅಂತಹದ್ದೇ ಒಂದು ಜೀವ ಕನಸು ಆಕಾಂಕ್ಷೆಗಳನ್ನು ಇಟ್ಟುಕೊಂಡು ಹೋಟೆಲ್‌ನಲ್ಲಿ ಬಾಲಕ ಕೋಪಿವಾಡನ ಹೋಟೆಲ್ ಕಥೆಯಲ್ಲಿ ಬರುವ ಸಂಗತಿ ಎಂದರೆ ಅತೀ ಚಿಕ್ಕವಯಸ್ಸಿನಲ್ಲಿ ಓದುವುದನ್ನು ಬಿಟ್ಟು ಮನೆಯ ಎಲ್ಲಾ ಜವಾಬ್ದಾರಿಯನ್ನು ತೆಗೆದುಕೊಳ್ಳುವ ತನ್ನ ತಂದೆ-ತಾಯಿಯನ್ನು ಚೆನ್ನಾಗಿ ನೋಡಿಕೊಳ್ಳಬೇಕು ಎನ್ನುವ ಹಂಬಲ. ತನ್ನ ಊರಿನವರಿಗೆ ಹೊಸಹೊಸ ರುಚಿಯ ಊಟ-ತಿಂಡಿಯನ್ನು ತಿನ್ನಿಸಬೇಕು ಬೇಕು ಎಂಬ ಹಂಬಲ.

ಕೆಲಸ ಹುಡುಕಿಕೊಂಡು ಬೆಂಗಳೂರಿನ ಹೃದಯಭಾಗದಲ್ಲಿ ಇರುವ ರಾಮಸಾಗರ ಉಡುಪಿ ಹೋಟೆಲ್‌ಗೆ ಟೇಬಲ್ ಲೋಟ ತಟ್ಟೆ ಪ್ಲೇಟು ಎಲ್ಲಾನೂ ಕ್ಲೀನ್ ಮಾಡುವ ಕೆಲಸಕ್ಕೆ ಸೇರಿದ, ತಿಂಗಳಿಗೆ ಎರಡು ಸಾವಿರ ಸಂಬಳ. ಕೊಪಿವಾಡ ಕೆಲಸಕ್ಕೆ ಸೇರಿದಾಗ ಚೆನ್ನಾಗಿ

ಕೆಲಸ ಮಾಡುವುದನ್ನು ಕಲಿಯಬೇಕು. ನಾನು ಅಡುಗೆಭಟ್ಟನಾಗಬೇಕು ಎಂಬ ಆಸೆ. ಆ ಹೋಟೆಲ್‌ನಲ್ಲಿ ದಕ್ಷಿಣ ಭಾರತ, ಉತ್ತರ ಭಾರತದ ನೂರೆಂಟು ಬಗೆಬಗೆಯ ಥರಾವರಿ ತಿನಿಸುಗಳು ಎಲ್ಲವೂ ಘಮಘಮ ಎನ್ನುವ ತಿಂಡಿ-ತಿನಿಸುಗಳು ಕಾಫಿ, ಟೀ, ದೋಸೆ, ಪಡ್ಡು, ಅಕ್ಕಿರೊಟ್ಟಿ, ಕಡುಬು, ಮಂಗಳೂರು ಸೀಮೆಯ ಬನ್‌ಬಜ್ಜಿ, ದಾಲ್ ರೋಟಿ, ಆಲೂ ಪರೋಟ, ವೆಜ್ ಕಡಾಯ್, ಪನೀರ್ ಮಸಾಲಾ, ಗೋಬಿಮಂಚೂರಿ ಇನ್ನು ಮುಂತಾದ ಐಟಮ್‌ಗಳು ಮೆನುಕಾರ್ಡ್‌ನಲ್ಲಿದ್ದು, ಹತ್ತಾರು ತಿಂಡಿಗಳನ್ನು ಕಲಿಯಬೇಕು. ನಮ್ಮೂರಿನ ಜನ ಮಂಡಕ್ಕಿ, ಮಿರ್ಚಿ ಆರೇಳು ರೀತಿಯ ತಿಂಡಿಯನ್ನು ಬಿಟ್ಟರೆ ಬೇರೆ ಯಾವುದು ಹೊಸ ತಿಂಡಿ ತಿಂದಿಲ್ಲ. ನಾನು ನಮ್ಮೂರಿನಲ್ಲಿ ಹೋಟೆಲ್ ತೆಗೆದು ನನ್ನ ಅಪ್ಪ-ಅಮ್ಮನನ್ನು ಯಜಮಾನರನ್ನಾಗಿ ಮಾಡಿ ,ನಾನು ಅಡುಗೆ ಮನೆಯಲ್ಲಿ ಎಲ್ಲರಿಗೂ ತಿಂಡಿ ಮಾಡಿ ಕೊಡಬೇಕು ಎಂಬ ತುಂಬು ಬಯಕೆ. ಈ ರೀತಿಯ ಯೋಚನೆ ಮಾಡಿಕೊಂಡೆ ಕೆಲಸ ಮಾಡುತ್ತಿದ್ದು, ಅಲ್ಲಿಯ ಜನರು ಅನ್ನದ ಬೆಲೆ ತಿಳಿಯದೇ ಇರುವರು ಅನ್ನವನ್ನು ಪ್ಲೇಟ್‌ನಲ್ಲಿ ಬಿಟ್ಟುಹೋಗುತ್ತಿದ್ದರು. ಇದರಿಂದ ಕೊಪ್ಪಿವಾಡ ಮನಸ್ಸಿಗೆ ತುಂಬ ಬೇಸರ ಮಾಡಿಕೊಳ್ಳುತ್ತಾ ಇದ್ದ.

[13]"ದೇವ್ರು ಇವ್ರಿಗೆ ಹೊಟ್ಟೆ ತುಂಬಾ ತಿನ್ನೋ ಅದೃಷ್ಟ ಕೊಟ್ಟಾನ... ಆದ್ರೆ ಇವ್ರಿಗೆ ಅನ್ನ ಚಲ್ಲೋ ಹುಚ್ಚು... ಈ ರೀತಿಯಾಗಿ ಅರ್ಧಮರ್ಧ ತಿಂಡಿ ಪ್ಲೇಟುಗಳನ್ನು ತನ್ನ ಬಕೇಟಿನಲ್ಲಿ ಎದ್ದುತ್ತಿದ್ದ" ಈ ರೀತಿಯಲ್ಲಿ ಸಮಾಜದ ಎರಡು ಮುಖಗಳನ್ನು ಅವನು ನೋಡುತ್ತಿದ್ದ.

ಒಂದು ದಿನ ಕೊಪ್ಪಿವಾಡನಿಗೆ ತನ್ನ ಕನಸು ನನಸಾಗುವುದಕ್ಕೆ ಇನ್ನೂ ಅನೇಕ ವರ್ಷವಾಗಬೇಕು ಇವನು ಅಡುಗೆ ಮನೆಗೆ ಹೋಗಬೇಕು ಎಂದರೆ, ತಾನು ಮಾಡುತ್ತಿರುವ ಕೆಲಸಕ್ಕೆ ಬೇರೆ ಯಾರಾದರೂ ಬರಬೇಕು ಒಂದು ದಿನ ಮಲ್ಕೇಸಿಯನ್ನು ಕೇಳಿದ, ಅದಕ್ಕೆ ಮಲ್ಕೇಸಿ ನೀನು ಇನ್ನೂ ಕಲಿಯಬೇಕು ಮೊದಲು ತರಕಾರಿ ಹಚ್ಚುವುದರಿಂದ ಕಲಿಯಬೇಕು.

ಒಂದುದಿನ ಕನಸು ನನಸಾಗುವ ದಿನ ಹತ್ತಿರ ಬಂದಿತ್ತು, ಆ ಹೋಟೆಲ್‌ನ ಮಾಲೀಕ ಬಂದು ನಿನ್ನ ಕೆಲಸಕ್ಕೆ ಬೇರೊಬ್ಬನನ್ನು ಸೇರಿಸಿಕೊಂಡಿದ್ದೀನಿ, ಯಾವುದೇ ಕಾರಣಕ್ಕೂ ನೀನು ಒಳಗಿನ ಅಡುಗೆ ಮನೆ ಕೋಣೆ ಬಿಟ್ಟು ಹೊರಗೆ ಕಾಣಿಸಿಕೊಳ್ಳಬಾರದು ಎಂದು ಹೇಳಿದ. ಈ ಮಾತು ಕೊಪ್ಪಿವಾಡನಿಗೆ ಆಕಾಶದಲ್ಲಿ ತೇಲುವ ಅನುಭವ. ಆತನು ಖುಷಿಯಿಂದ ದೇವರಿಗೆ ಕೈಮುಗಿದ ಆದರೆ, ನಿಜವಾದ ಸತ್ಯವೇನೆಂದರೆ, [14]"ನಮ್ಮ ಹೋಟೆಲ್‌ನಲ್ಲಿ ಬಾಲಕಾರ್ಮಿಕರಿಲ್ಲ, ಬಾಲಕಾರ್ಮಿಕ ಪದ್ಧತಿ ಅಪರಾಧ ಇದಕ್ಕೆ ನಮ್ಮ ವಿರೋಧವಿದೆ". ಎನ್ನುವ ಸಾಲು ಮಾಲೀಕ ಕಾನೂನುಬಾಹಿರ ಆಪಾದನೆಯಿಂದ ತಪ್ಪಿಸಿಕೊಳ್ಳಲು ಮಾಡಿದ್ದ. ಸಾರ್ವಜನಿಕರಿಗೆ ಪ್ರವೇಶವಿಲ್ಲ ಎಂಬ ಹೊಗೆಗೂಡಿನ ಮನೆ ಕೆಲಸ ಮಾಡಿ ಸುಸ್ತಾಗಿ ಹೊರಗೆ ಬಂದ ಅವನ ಮೈಯಲ್ಲಿ ಮಸಿ ತುಂಬಿತ್ತು. ಅಧಿಕಾರಿಗಳು ಕೊಪ್ಪಿವಾಡನನ್ನು ಹಿಡಿದು ಆ ಹೋಟೆಲ್ ಮಾಲೀಕನ ಹತ್ತಿರ ಬಂದು ಇವನು ನಿಮ್ಮ ಹುಡುಗನೆ ಎಂದು ಕೇಳಿದರು. ಆ ಮಾಲೀಕ ವಿಧಿಯಿಲ್ಲದೆ ಒಪ್ಪಿಕೊಂಡ.

ಸಮಾಜದ ಬಡತನ ರೇಖೆಗೆ ಒಂದು ಪರಿಹಾರ ನೀಡಿದ್ದಾರೆ. ಕೊಪ್ಪಿವಾಡ ಮೂಕ ಪ್ರಾಣಿಯಂತೆ ಗಮನಿಸುತ್ತಿದ್ದು ಕೊಪ್ಪಿವಾಡನಿಗೆ ಇದು ಯಾವುದೂ ಗೊತ್ತಿಲ್ಲ ಯಾವುದೇ ಕಾನೂನು ಗೊತ್ತಿಲ್ಲ ಕೇವಲ ತನ್ನ ಕನಸು.

[15]"ನಾನು ಚಿಕ್ಕವ ನನ್ನ ಕನಸುಗಳು ಮತ್ತು ಆಸೆಗಳು ಏನು ಎಂಬುದು ಅವರಿಗೆ ಗೊತ್ತಾಗಿದೆ. ನನ್ನ ಕನಸುಗಳು ಮತ್ತು ಆಸೆಗಳು ಏನು ಎಂಬುದು ಅವರಿಗೆ ಗೊತ್ತಾಗಿದೆ ನನ್ನ ಕನಸುಗಳನ್ನು ಕದಿಯಲು ಬಂದಿದ್ದಾರೆ".

ಕೊಪ್ಪಿವಾಡನಿಗೆ ಅಧಿಕಾರಿಗಳು ಇಷ್ಟು ಚಿಕ್ಕವನು ನಿನಗೆ ಓದುವುದಕ್ಕೆ ಆಸೆ ಇಲ್ಲವೆ, ನೀನು ಓದಿ ವಿದ್ಯಾವಂತನಾಗಬೇಕು ಅದಕ್ಕೆ ಕೊಪ್ಪಿವಾಡ, [16]"ಸಾಯಬ್ರ... ನಂಗೆ ಓದಾಕ ಇಷ್ಟ ಇಲ್ಲ... ನಾ ಓದಿದ್ರೆ ನಮ್ಮೂರ್‍ನಾಗ ಹೋಟ್ಲ ಇಡಾಕ್ ಆಗಂಗಿಲ್ರೀ ನನ್‌ಬಿಟ್‌ಬಿಡ್ರಿ ಸಾಯಬ್ರ ನೀವ್ ಹೇಳ್ದಂಗ್ ಕೇಳ್ತೀನಿ".

ಈ ರೀತಿಯ ಕೊಪ್ಪಿವಾಡನ ಕನಸು ನನಸಾಗಲಿಲ್ಲ ಬಾಲಾಕಾರ್ಮಿಕ ಇಲಾಖೆಗೆ ಅವನು ವಿದ್ಯಾವಂತನಾಗಬೇಕು ಎಂಬ ಬಯಕೆ. ಆದರೆ ಅದು ಕೋಪಿವಾಡನಿಗೆ ದೊಡ್ಡ ನೋವು ಆಯಿತು, ತನ್ನ ಕನಸುಗಳು ಭಗ್ನವಾಯಿತು' ಎಂದು ಹೋಟೆಲ್ ಮಾಲೀಕನಿಗೆ ದುಡ್ಡು ಮಾಡುವುದರ ಜೊತೆಗೆ ತನ್ನ ಸ್ವಾರ್ಥ ಹೆಚ್ಚಾಯಿತು, ಇವರ ಮಧ್ಯೆ ಕೋಪಿವಾಡನ ಹೋಟೆಲ್ ಮಾಡುವ ಕನಸು ನುಚ್ಚುನೂರಾಯಿತು.

ಈ ಜಾಗತೀಕರಣ ಕಾಲದಲ್ಲಿ ಒಂದು ಗಂಡು-ಹೆಣ್ಣಿನ ನಡುವೆ ನಡೆಯುವ ಚಿತ್ರಣವೇ ಬೇರೆ.

ಸೌದಾಮಿನಿ ಅಪಾರ್ಟ್‌ಮೆಂಟ್ ಕಥೆಯಲ್ಲಿ ಮದುವೆ ಆಗಿರದ ಯುವಕ-ಯುವತಿಯರ ಚಿತ್ತ ವೃತ್ತಿಯ ಚಿತ್ರಣ ಸಹಜವಾಗಿದೆ. ಸೊಗಸಾಗಿದೆ ಭ್ರಾಮಕ ಚಿತ್ರ, ಭಾವಪೂರ್ಣ ಚಿತ್ರಣ ಕುತೂಹಲ ಮೂಡುವ ಕಥೆಯಾಗಿ ಮೂಡಿಬಂದಿದೆ. ಕಥೆಯ ನಾಯಕ ಯೌವ್ವನದಲ್ಲಿ ಹೆಣ್ಣಿನ ಬಗ್ಗೆ ಕನಸು ಕಾಣುವ ಪ್ರವೃತ್ತಿ ಎಲ್ಲ ಯುವಕರಲ್ಲೂ ಇರುತ್ತದೆ. ಹಾಗೆಯೇ ಇವರಲ್ಲೂ ಸಹಜವಾಗಿದೆ. ಇವರು ಹೈಸ್ಕೂಲ್‌ನಲ್ಲಿ ಇದ್ದಾಗಲೇ ಕೆಟ್ಟಚಟಗಳಿಗೆ ಅಂದರೆ ಪೋಲಿ ಹುಡುಗರ ಜೊತೆ ಸಿಗರೇಟು, ಪಾನ್ ಪರಾಗ್ ಎಲ್ಲವೂ ಎಸ್ಸೆಲ್ಸಿಯಲ್ಲಿಯಾಗಿತ್ತು. ಕಾಲೇಜಿಗೆ ಸೇರಿದ ಮೇಲೆ ಜಾಹೀರಾತನ್ನು ಓದಿ ಮೂಢನಾಗಿ ಸಿಗರೇಟು, ಪಾನ್ ಮುಂತಾದ ಚಟಕ್ಕೆ ಬಲಿಯಾಗಿದ್ದರು. ಜೊತೆಗೆ ಒಂದು ಹುಡುಗಿಯನ್ನು ಪ್ರೀತಿಸಿದ್ದರು. ಅವಳು ಸಿಕ್ಕರೆ ನನ್ನ ಜೀವನ ಪಾವನ ಎಂದು ಕೊಂಡಿದ್ದ ಇವರಿಗೆ ಮೋಸವಾಯಿತು.

ಮೋಸವಾದ ಮೇಲೆ ಇವರು ಯಾವುದೇ ಕೆಟ್ಟಚಟಕ್ಕೆ ಬಲಿಯಾಗದೆ ಬದಲಾಗಿ ಕುವೆಂಪು, ಕಾರಂತರು, ಭೈರಪ್ಪ, ಅನಂತಮೂರ್ತಿಯವರ ಪುಸ್ತಕಗಳನ್ನು ಓದುತ್ತಿದ್ದರು. ಇದರಿಂದ ಆ ಹುಡುಗಿಯ ನೆನಪು ಬರುತ್ತಿರಲಿಲ್ಲ. ಕೆಲಸ ಬಿಟ್ಟ ಮೇಲೆ ಹೆಚ್ಚು ಓದಲು

ಶುರುಮಾಡಿದ್ದರು. ಲೇಖಕರು ಹೂಗಳಿಂದ ವೈಭವೀಕರಿಸಿದ ಹೆಣ್ಣಿನ ಅಂತರಂಗ, ಬಹಿರಂಗವನ್ನು ಮತ್ತೆ ಮತ್ತೆ ಓದಿ ಆಸ್ವಾದಿಸುತ್ತಿದ್ದರು. ಅವನನ್ನು ಕಂಪಿಸುವ ಶಕ್ತಿಯಿರುವ ಆಕೆಯನ್ನು ಮನದಲ್ಲಿ ನೆನೆದರೆ ಸಾಕು ಮೈಮೇಲಿನ ರೋಮಗಳು ನವಿರೇಳುತ್ತಿದ್ದವು. ಗಂಡಿನ ಮನಸ್ಸನ್ನು ಹಿಡಿದಿಡುವ ಆ ಹೆಣ್ಣು ನಿಜವಾಗಿಯೂ ಒಂದು ಮಾಯೆಯೇ ಸರಿ.

ಹೀಗಾದಾಗ, ಪಾರ್ಕ್‌ಗೆ ದಿನವು ಇವರು ಸಂಜೆ ಹೋಗುತ್ತಿದ್ದರು ಅಲ್ಲಿಯು ಒಂದು ಸುಂದರ ಹುಡುಗಿ ಬರುತ್ತಿದ್ದಳು ಆ ಹುಡುಗಿಯನ್ನು ನೋಡುತ್ತಾ ಅವಳ ಸೌಂದರ್ಯವನ್ನು ವರ್ಣನೆ ಮಾಡುತ್ತಿದ್ದ ಮನಸ್ಸಿನಲ್ಲಿ ಆ ಹುಡುಗಿಯ ಮಾತನಾಡುವ ಪ್ರಯತ್ನ ಮಾಡಿದ್ದರು. ಆದರೆ ಆಗಲಿಲ್ಲ ಒಂದುದಿನ ರವಿವಾರದ ಸಾಪ್ತಾಹಿಕ ಪುರವಣಿಯಲ್ಲಿ ಪ್ರಕಟವಾದ ಒಂದು ಗಂಭೀರವಾದ ಕಥೆಯನ್ನು ಓದುತ್ತಿದ್ದರು. ಆ ಕಥೆಯಲ್ಲಿ ಬರುವ ಸಾಂಗತ್ಯ ವಿಷಯಗಳನ್ನು ತಾವೇ ಅನುಭವಿಸಿದಂತೆ ಮನಗಂಡಂತೆ, ಕಣ್ಣಿಗೆ ಕಂಡಂತೆ ಬರೆದಿದ್ದರು ಹಾಗೆ ಆ ಹುಡುಗಿ ಬೆಂಚಿನ ಹತ್ತಿರ ಬಂದು ಆ ಪತ್ರಿಕೆ ಕೇಳಿ ತೆಗೆದುಕೊಳ್ಳುತ್ತಾಳೆ. ಆಗ ಅವರಿಬ್ಬರ ಪರಿಚಯವಾಗುತ್ತದೆ.

ಈ ಕಥೆಯನ್ನು ಬರೆದ ಲೇಖಕಿಯ ಹೆಸರು 'ಸೌದಾಮಿನಿ' ಎಂದು ಗೊತ್ತಾಗುತ್ತದೆ. ಜೊತೆಗೆ ಆ ಸುಂದರಿಯೇ ಈ ಲೇಖಕಿ ಎಂದು ತಿಳಿದು ಅಶ್ಚರ್ಯವಾಗುತ್ತದೆ. ಹೀಗೆ ಅವರಿಬ್ಬರ ಪರಿಚಯ ತಿಳಿದು ಅವರ ಜೀವನಕಥೆಯನ್ನು ಹೇಳಿತ್ತು. ತಾವು ಪ್ರೀತಿಸಿದ ಹುಡುಗ ನಮ್ಮನ್ನು ಬಿಟ್ಟುಹೋಗಿದ್ದಾನೆ. ಅವನು ಯಾಕೆ ಬಿಟ್ಟುಹೋದ ಎಂಬುದು ನನಗೆ ಈಗಲೂ ಗೊತ್ತಾಗಿಲ್ಲ ಎಂದು ಹೇಳುತ್ತಾಳೆ. ಹೀಗೆ ಆಕೆಯ ಜೀವನದ ಸಂಗತಿಯನ್ನು ಹೇಳಿ ಪಾರ್ಕ್‌ನಲ್ಲಿ ಮಾತಾಡಿ ಇಬ್ಬರೂ ಪರಿಚಯವಾಗಿ ಮೊಬೈಲ್ ನಂಬರ್ ಕೊಟ್ಟ ಮನೆಗೆ ಹೋಗುತ್ತಾರೆ. ಹೀಗೆ ಅವರ ಸ್ನೇಹ ಪ್ರಾರಂಭವಾಗಿ ಇಬ್ಬರೂ ಆತ್ಮೀಯರಾಗುತ್ತಾರೆ.

ರವಿಗೆ ಸೌದಾಮಿನಿಯ ಸೌಂದರ್ಯ ತಲೆಕೆಡಿಸುತ್ತಿರುತ್ತದೆ. ಅವರು ಕಥೆ ಕಾದಂಬರಿಯಲ್ಲಿ ಓದಿದ್ದ ಹೆಣ್ಣಿನ ಸೌಂದರ್ಯವನ್ನು ನಿಜವಾಗಿಯೂ ಅನುಭವಿಸಬೇಕು ಎಂದುಕೊಳ್ಳುತ್ತಾರೆ. ಇವರಿಬ್ಬರು ಹೋಟೆಲ್ ಪಬ್ ರೆಸ್ಟೋರೆಂಟ್ ಅಂತ ಕುಡಿದು ಸುತ್ತಾಡಿ, ಸೌದಾಮಿನಿಯ ಅಪಾರ್ಟ್‌ಮೆಂಟ್‌ಗೆ ಬರುತ್ತಾರೆ. ರವಿಗೆ ಇದು ಪ್ರೀತಿಯೋ ಮೋಹವೋ ಎಂಬುದು ತಿಳಿಯದು. ಸೌದಾಮಿನಿಯ ಸೌಂದರ್ಯ ತಲೆಕೆಡಿಸಿದೆ [17]'ವುಡ್ ಯು ಬಿ ಇಂಟರ್‌ಸ್ಟೆಡ್ ಇನ್‌ಸೆಕ್ಸ್ ವಿತ್‌ಮಿ' ಎಂದು ಕೇಳಿದ ಆಗ ಅವಳು ಒಪ್ಪಿಗೆ ನೀಡಿ ಕೋಳಗಳ ಮೊಟ್ಟೆಗಳಿಗೆ ಕೊಡುವ ಬೆಚ್ಚನೆ ಅವಳ ದೇಹ ಸ್ಪರ್ಶದಿಂದ ಸಿಕ್ಕಿಹಾಕಿಕೊಂಡರು. ಕೊನೆಗೆ ಅವರಿಗೆ ಬೇಕಾದ ಅನುಭವ ಸಿಕ್ಕಿತು. ಹೆಣ್ಣಿನ ರೂಪುರೇಖೆಗಳನ್ನು ಓದಿದ ಅವರಿಗೆ ಪ್ರಾಯೋಗಿಕವಾಗಿ ಅನುಭವಿಸುತ್ತಿದ್ದೇನೆ ಎಂದು ಕಾವ್ಯಾತ್ಮಕವಾಗಿ ಬಣ್ಣಿಸಿದ್ದ ಮೋಕ್ಷದ ಸುಖದ ಸತ್ಯವೇ? ಅಥವಾ ಬೇರೆ ಇದೆಯಾ? ಎಂಬುದು ತಿಳಿಯದೆ ಅವಳಿಂದ ಸಂಭ್ರಮಿಸಿದ ನಿಜವಾಗಿಯು ನಾನು ಧನ್ಯ ಎಂದು ಸೌದಾಮಿನಿ ಎನ್ನುವಾಗ ಸೌಧಾಮಿನಿ ನನ್ನ ಬಿಟ್ಟುಹೋಗಬೇಡ ಎಂದು ಕಿರುಚುತ್ತಾನೆ. ಆದರೆ ನಿಜವಾದ ಸತ್ಯ ಅವನು ಕಿರುಚುವುದನ್ನು ನೋಡಿ ರವಿಯ ಅಮ್ಮ ಬಾಗಿಲು ಬಡಿಯುತ್ತಾಳೆ. ರವಿ ಏನಾಯಿತು ಎಂದಾಗ

ಎಚ್ಚರಗೊಂಡ ರವಿ ತಡಬಡಿಸಿ ಎದ್ದು ಇದುವರೆಗೂ ಕಂಡಿದ್ದು ಕನಸೆಂದು ಅರಿವಿಗೆ ಬರುತ್ತದೆ.

ಹಾಗೆ ಒಳೊಳಗೆ ನಕ್ಕು ಇದು ಭ್ರಮೆ ಎಂದು ಸುಮ್ಮನಾಗುತ್ತಾರೆ. ಫಕೀರ ಅವರು ಒಂದು ಕನಸ್ಸನ್ನು ಬಹಳ ಸುಂದರವಾಗಿ ತೋರಿಸಿದ್ದಾರೆ.

ಜಾಗತೀಕರಣ ಇಂದು ನಮ್ಮನ್ನು ಕಾಡುತ್ತಿರುವ ಭೂತವಾಗಿದ್ದು, ಕೆಂಬಳ್ಳಿಯ ಜನ ದೆವ್ವ ಹಿಡಿದವರಂತೆ ತಮ್ಮ ಸಹಜ ಜೀವನದಿಂದ ಓಡಿಹೋದ ದುರಂತವನ್ನು ಕಥೆಗಾರರು ಹೇಳುತ್ತಾರೆ. ಹಳ್ಳಿಯಿಂದ ನಗರಕ್ಕೆ ಬಂದ ಜನರು ಜೀವನ ಸಾಗಿಸುತ್ತಿರುವ ಪರಿ, ಈ ರೀತಿಯ ಹೊರಚಾಚು ಮನುಷ್ಯನನ್ನು ಎಷ್ಟು ದುರ್ಬಲಗೊಳಿಸಿದೆ ಎಂಬುದನ್ನು ಈ ಅಧ್ಯಯನದಲ್ಲಿ ಗುರುತಿಸಿದ್ದೇನೆ.

**ಅಡಿ ಟಿಪ್ಪಣಿಗಳು:**

1. ಅನಾಥ ಮನಸ್ಸುಗಳು (ದೇವರ ಜೋಳಿಗೆ) – ಪುಟಸಂಖ್ಯೆ: 39
2. ಅನಾಥ ಮನಸ್ಸುಗಳು (ದೇವರ ಜೋಳಿಗೆ) – ಪುಟಸಂಖ್ಯೆ: 50
3. ಅನಾಥ ಮನಸ್ಸುಗಳು (ದೇವರ ಜೋಳಿಗೆ) – ಪುಟಸಂಖ್ಯೆ: 42
4. ಅನಾಥ ಮನಸ್ಸುಗಳು (ದೇವರ ಜೋಳಿಗೆ) – ಪುಟಸಂಖ್ಯೆ: 51
5. ಅಪ್ಪನ ಟೆಲಿಗ್ರಾಮ್ (ದೇವರ ಜೋಳಿಗೆ) – ಪುಟಸಂಖ್ಯೆ: 18
6. ಅಪ್ಪನ ಟೆಲಿಗ್ರಾಮ್ (ದೇವರ ಜೋಳಿಗೆ) – ಪುಟಸಂಖ್ಯೆ: 23
7. ಅಪ್ಪನ ಟೆಲಿಗ್ರಾಮ್ (ದೇವರ ಜೋಳಿಗೆ) – ಪುಟಸಂಖ್ಯೆ: 24
8. ಅಪ್ಪನ ಟೆಲಿಗ್ರಾಮ್ (ದೇವರ ಜೋಳಿಗೆ) – ಪುಟಸಂಖ್ಯೆ: 28
9. ಪೀಪಿಂಗ್‌ಟಾಮ್ (ದೇವರ ಜೋಳಿಗೆ) – ಪುಟಸಂಖ್ಯೆ: 32
10. ಪೀಪಿಂಗ್‌ಟಾಮ್ (ದೇವರ ಜೋಳಿಗೆ) – ಪುಟಸಂಖ್ಯೆ: 32
11. ಪೀಪಿಂಗ್‌ಟಾಮ್ (ದೇವರ ಜೋಳಿಗೆ) – ಪುಟಸಂಖ್ಯೆ: 34
12. ಪೀಪಿಂಗ್‌ಟಾಮ್ (ದೇವರ ಜೋಳಿಗೆ) – ಪುಟಸಂಖ್ಯೆ: 37
13. ಕೋಪಿವಾಡನ ಹೊಟೇಲ್ (ದೇವರ ಜೋಳಿಗೆ) – ಪುಟಸಂಖ್ಯೆ: 150
14. ಕೋಪಿವಾಡನ ಹೊಟೇಲ್ (ದೇವರ ಜೋಳಿಗೆ) – ಪುಟಸಂಖ್ಯೆ: 161
15. ಕೋಪಿವಾಡನ ಹೊಟೇಲ್ (ದೇವರ ಜೋಳಿಗೆ) – ಪುಟಸಂಖ್ಯೆ: 163
16. ಕೋಪಿವಾಡನ ಹೊಟೇಲ್ (ದೇವರ ಜೋಳಿಗೆ) – ಪುಟಸಂಖ್ಯೆ: 163
17. ಸೌದಾಮಿನಿ ಅಪಾರ್ಟ್‌ಮೆಂಟ್ (ಅಮ್ಮನ ಆಟೋಗ್ರಾಫ್) – ಪುಟಸಂಖ್ಯೆ: 71

## ಅಧ್ಯಾಯ : ೫

### ಫಕೀರ ಅವರ ಅನುಭವದ ಬುತ್ತಿ: ಒಂದು ಮರುನೋಟ:

ಫಕೀರರ ಅನಾಥ ಮನಸ್ಸುಗಳು, ಅನುಸೂಯಮ್ಮನ ಗರಡಿ ಮನೆ, ಸಾಬರ ಹುಡುಗಿ, ಪೋಸ್ಟ್‌ಮಾರ್ಟಂ, ಹಲ್ಕಾ ಬದುಕಿನ ನಡುವೆ, ಮುಂತಾದ ಕಥೆಗಳಲ್ಲಿ ಸಮಾಜವಾದ ಚಿಂತನೆಗಳನ್ನು ಗುರುತಿಸುತ್ತಾ ದಾರಿ ತಪ್ಪಿದಾಗ ದಾರಿ ತೋರಿಸುತ್ತಾರೆ. ಕತ್ತಲೆಯಲ್ಲಿದ್ದಾಗ ಬೆಳಕು ಹಿಡಿಯುತ್ತಾರೆ. ಅನೇಕ ನೆನಪುಗಳು, ನಿರುದ್ಯೋಗ, ಹಸಿವು, ನಿರಾಶೆ, ಸೋಲು, ಅವಮಾನ, ಜಿಗುಪ್ಸೆ, ಆಸೆ, ಸಾಲ, ಕಾಮ, ಒಂಟಿತನ, ಮೋಸ ಎಲ್ಲವನ್ನೂ ತೋರಿಸುತ್ತಾರೆ.

ಕತೆಗಾರರು ತಮ್ಮ ಪಾತ್ರಗಳ ಚಟಗಳ ಬಗ್ಗೆ ಬರೆಯುತ್ತ ಬದುಕಿನ ಅಸಹಾಯಕತೆಗಳು ಇದಕ್ಕೆ ಕಾರಣ ಎಂದು ಹೇಳುತ್ತಾರೆ. ಶ್ರಮದಲ್ಲಿ ಬೈಪಾಸ್ ದಾರಿಹಿಡಿಯುವ ಪಾತ್ರಗಳು ಬಹಳಷ್ಟು ಅವರ ಕಥೆಗಳಲ್ಲಿ ಇದೆ. ಕೈಹಿಡಿದ ಹೆಂಡತಿಯನ್ನು ಮರೆಯುವ ಅಥವ ಬಿಟ್ಟುಬಿಡುವ ಶಿಕ್ಷೆಗಳನ್ನು ಆ ಪಾತ್ರಗಳು ಅವರ ಕತೆಗಳಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳುತ್ತವೆ. ಅಮ್ಮನ ಬೇಸರ ಅರ್ಥಮಾಡಿಕೊಳ್ಳಲಾಗದ ಮಗನ ವಯಸ್ಸಿನ ಆವೇಶ ಕಾಣಬಹುದು. ಸಮಾಜವನ್ನು ದ್ವೇಷಿಸುವುದಕ್ಕಿಂತ ಹುಟ್ಟಿಸಿದ ದೇವರನ್ನು ಅಪ್ಪನನ್ನು ದ್ವೇಷಿಸುವ ದುಮ್ಮಾನ ಪಾತ್ರಗಳಲ್ಲಿ ಕಾಣಬಹುದು. ಮಾನಸಿಕವಾಗಿ ಏನನ್ನು ಎದುರಿಸಲಾರದ ಸ್ಥಿತಿಗೆ ತಂದು ತನ್ನನ್ನು ಷಂಡನನ್ನಾಗಿಸಿದ ಸಮಾಜದ ಬಗ್ಗೆ ರಹೀಂ ಸಾಹೇಬನ ದ್ವಂದ್ವ ಚಹರೆಗಳನ್ನು ಸಮಾಜದ ಶೈಕ್ಷಣಿಕ ಸ್ತರವನ್ನು ಕತ್ತರಿಸುವ ಹುನ್ನಾರಗಳು ಕತೆಗಳಲ್ಲಿ ಕಾಣಿಸಿಕೊಳ್ಳುತ್ತವೆ.

### ಫಕೀರ ಅವರ ಕಥೆಗಳಲ್ಲಿ ಸಮಾಜವಾದದ ನೆಲೆಯ ಚಿಂತನೆಗಳು:

ಕಥೆಗಾರರು ಸಮಾಜದ ತಮ್ಮ ಎಲ್ಲಾ ಕಥೆಗಳಲ್ಲಿ ಸಾಮಾಜಿಕತೆಯ ವಿಶೇಷ ದುರ್ಬೀನನ್ನು ಬಳಸಿ ತಮ್ಮ ಒಳನೋಟವನ್ನು ಬಿಂಬಿಸುತ್ತಾ ಸಾಗುತ್ತಾರೆ. ಅವರ ಕಥೆಗಳಲ್ಲಿ ಎಲ್ಲೋ ಒಂದು ಎರಡು ಕಥೆಗಳನ್ನು ಬಿಟ್ಟು ಉಳಿದೆಲ್ಲಾ ಕಥೆಗಳು ಸಮಾಜವನ್ನು ಚಿಕಿತ್ಸಕ ಕಣ್ಣುಗಳಿಂದ ನೋಡುತ್ತಾ ಸಾಗಿದೆ. ಅಪ್ಪನ ಟೆಲಿಗ್ರಾಮ್ ಕಥೆಯಲ್ಲಿ ಎಲ್ಲೋ ಸಿಕ್ಕ ಮಂಜುನಾಥ್‌ನಾಯ್ಕನ ಪರಿಚಯ ಮಾಡುತ್ತಾ ಕುವೈತ್‌ನಲ್ಲಿ ಕೆಲಸ ಮಾಡುತ್ತಿರುವ ಅವನ ಬದುಕನ್ನು ಹೇಳುತ್ತ, ಕುವೈತ್‌ನಲ್ಲಿ ಒಬ್ಬ ಶೇಕ್ ಮನೆಯಲ್ಲಿ ಕೆಲಸ ಮಾಡಿದ್ದಾರೆ. ಆತನಿಗೆ ತಿಂಗಳ ಸಂಬಳ ನಮ್ಮ ದೇಶಕ್ಕೆ ಹೋಲಿಕೆ ಮಾಡಿದರೆ ಐವತ್ತು ಸಾವಿರ ರೂಪಾಯಿ.

[1]"ತಿಂಗಳ ಸಂಬ್ಳದಲ್ಲಿ ಕಡ್ಮೆ ಅಂದ್ರೂ ನಲವತ್ತು ಸಾವಿರ ಉಳ್ಸೇತ್ತೀನಿ. ಅದನ್ನೇ ಊರಲ್ಲಿರುವ ಹೆಂಡ್ತಿ ಮಕ್ಳಿಗೆ ಕಳ್ಸಿ ಕೊಡ್ತೀನಿ... ಎಷ್ಟು ಬೇಕೋ ಅಷ್ಟು ಖರ್ಚು ಮಾಡ್ಕೋತಾರೆ ಉಳಿದನ್ನ ಬ್ಯಾಂಕ್‌ಗೆ ಹಾಕ್ಕೋತ್ತಾರೆ... ಇನ್ನೆರಡುವರ್ಸ ಸಾರ್... ಅಲ್ಲಿ ಚೆನ್ನಾಗಿ ಕೆಲ್ಸ ಮಾಡಿ ಮತ್ತೆ ಶಿರ್ಸಿಗೆ ಬಂದು ಒಂದು ಸಣ್ಣ ಹೋಟ್ಲು ಇಲ್ಲವೇ ಬೇಕ್ರಿ ಮಾಡ್ಕೊಂಡು ಇದ್‌ಬಿಡ್ತೀನಿ. ಉಳಿದ ದುಡ್ಡನ್ನು ಮಗಳ ಮದ್ವುಗೆ ಫಿಕ್ಸ್ ಮಾಡಿ ಲೈಫು ಸೆಟ್ಲು ಮಾಡ್ಕೋಬೇಕು".

ಈ ರೀತಿಯಲ್ಲಿ ತನ್ನ ಬದುಕಿನ ಬಗ್ಗೆ ಹೇಳುತ್ತಾ ಅವರು ಹೋಗುತ್ತಾರೆ. ಶಿರಸಿ, ಸಿದ್ಧಾಪುರ ಯಲ್ಲಾಪುರ, ಸೊರಬ, ಸಾಗರ, ಊರೂರು ಸುತ್ತುತ್ತಿದ್ದ ಇವನಿಗೆ ನಾಲ್ಕಕ್ಷರ ಓದಲು ಬರೆಯಲು ಬರುವುದಿಲ್ಲ ಅಂತಹವನಿಗೆ ವಿದೇಶ ಪ್ರಯಾಣ ಮಾಡುವ ಯೋಗ. ಅಪ್ಪಟ ಕನ್ನಡಿಗರಾದ ಮಂಜುನಾಥನಾಯ್ಕ ಕನ್ನಡ ಮಾತಿನಿಂದಲೇ ಪರಿಚಯವಾಗಿ ತನ್ನ ಮೂಲವನ್ನೆಲ್ಲಾ ಅರ್ಧಗಂಟೆಯಲ್ಲಿ ಹೇಳಕೊಂಡಿದ್ದರು. ಮಂಜುನಾಥ ಅಲ್ಪಸ್ವಲ್ಪ ಮಲೆಯಾಳ ಭಾಷೆ ಗೊತ್ತಿದ್ದರಿಂದ ಕುವೈತ್‌ನಲ್ಲಿ ಕೆಲಸ ಸಿಕ್ಕಿತ್ತು. ನಾನು ಇಲ್ಲಿ ಮಾತ್ರ ಕನ್ನಡದವ. ಅಮ್ಮ ಮಲಯಾಳ, ಅಪ್ಪ ನಾಯ್ಕರ ಪೈಕಿಯವರು. ಅಮ್ಮನ ಭಾಷೆಯಿಂದಲೇ ನನ್ನ ಬದುಕು ಹಸನಾಯಿತು ಎಂದು, ಇದರಿಂದ ದೂರದೇಶದ ಸುಯೋಗ ನನಗೆ ಸಿಕ್ಕಿತು'. ಶಿವಮೊಗ್ಗ ಮಡಿಕೇರಿಯ ಮಲ್ಲು ಹುಡುಗರು ದುಬೈ ಕುವೈತ್ ಸೇರಿದ್ದರು. ಆದ್ದರಿಂದಲೇ ಅರಬ್ ರಾಷ್ಟ್ರಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕೇರಳಿಗರೆ ಸಣ್ಣ ಕೆಲಸದಿಂದ ದೊಡ್ಡಕೆಲಸದವರೆಗೂ ಮಲೆಯಾಳಿಗಳಿಗೆ ಹೆಚ್ಚಿನ ಪ್ರಾಮುಖ್ಯತೆ. ಒಂದೇ ತಿಂಗಳಲ್ಲಿ ಪಾಸ್‌ಪೋರ್ಟ್ ಮಾಡಿಸಿ ಏಜೆಂಟರ ಮೂಲಕ ಕುವೈತ್ ಸೇರಿಕೊಂಡು, ಎಲ್ಲರೂ ಒಟ್ಟಿಗೆ ಇರಲು ಸಾಧ್ಯವಿರಲಿಲ್ಲ. ಎಲ್ಲರೂ ಒಂದೊಂದು ಮೂಲೆಗೆ ನಿಯೋಜಿಸಲಾಗಿತ್ತು. ಮಂಜುನಾಥ್‌ರವರನ್ನು ಕುವೈತ್‌ನ ಅಲ್‌ಝುಫರ್‌ನಲ್ಲಿ ಕೆಲಸ ಮಾಡಲು ನಿಯೋಜಿಸಲಾಗಿತ್ತು. ಹಿಂದಿ, ಮಲೆಯಾಳಂ ಭಾಷೆ ಕೆಲಸಕ್ಕೆ ಅನುಕೂಲವಾಗಿತ್ತು. ಅಲ್ಲಿ ಕನ್ನಡ ಮನಸ್ಸು ಮಾತ್ರ ಮತ್ತೆ ಶಿರಸಿಗೆ ಬಂದು ಹೊಸ ಬದುಕು ಕಟ್ಟಿಕೊಳ್ಳುವಂತೆ ಹೇಳುತ್ತಲೇ ಇತ್ತು.

ಹೀಗೆಯೇ ಅರಬ್ ದೇಶಗಳಿಗೆ ರಫ್ತು ಆಗುವ ಉತ್ತರ ಕನ್ನಡ, ಶಿವಮೊಗ್ಗ, ಮಡಿಕೇರಿ, ಚಿಕ್ಕಮಂಗಳೂರು, ಸಾಗರ ಮುಂತಾದ ಮಲೆಯಾಳ ಹಾಗೂ ಕನ್ನಡ ಮಾತನಾಡುವ ದುಡಿಮೆ ಬಯಸಿ ಬಂದರು ಎಂಬುದು ಅಕ್ಷರ ಸಹ ನಿಜ. ಪಾಶ್ಚಾತ್ಯ ಹಾಗೂ ಪೌರಾತ್ಯ ನಾಡುಗಳು ತನ್ನ ಕಟ್ಟುವಿಕೆಯಲ್ಲಿ ವಿಭಿನ್ನತೆಯನ್ನು ಬಿತ್ತಿದ್ದರು. ಆಯಾಯ ನೆಲಕ್ಕೆ ಆಯಾಯ ಗುಣಗಳು ಅಲ್ಲಿಯ ಬದುಕುಗಳು ರೂಪುಗೊಮಡಿರುವ ಅನಿವಾರ್ಯತೆಯನ್ನು ಕಥೆಗಾರರು ಅಪ್ಪನ ಟೆಲಿಗ್ರಾಮ್ ಕಥೆಯಲ್ಲಿ ಒಪ್ಪಿಕೊಳ್ಳುತ್ತಾರೆ.

ನನಗೆ ಅನಿಸಿದಂತೆ ಈ ಅಪ್ಪನ ಪಾತ್ರ ಕಥೆಗಾರರಿಗೆ ಬಹಳ ಹತ್ತಿರದ ಪಾತ್ರವಾಗಿದ್ದು, ಪಾತ್ರದ ಬೆಳವಣಿಗೆ ಬರುತ್ತದೆ, ಎಲ್ಲಾಕಡೆ ಅಪ್ಪನ ಈ ಬದುಕನ್ನು ಆಯ್ಕೆ ಮಾಡಿಕೊಂಡಿರುವುದು ಆಶ್ಚರ್ಯವೇನಿಲ್ಲ. ಈ ನಗರದಲ್ಲಿ ಎಂಥವನಾದರೂ ಲೋಭಿಯಾನ್ನಾಗಿ ಬಿಡುತ್ತವೆ. ಈ ವೈಭವ ಇಲ್ಲಿ ಸೃಷ್ಟಿಸಿರುವಾಗ ಎಂತಹವರು ತಮಗೆ ಗೊತ್ತಿಲ್ಲದೆ ದಾರಿ ತುಳಿಯುತ್ತಾರೆ. ಅಪ್ಪ ಅಮ್ಮನಿಂದ ವರ್ಷಗಟ್ಟಲೆ ದೂರವಿರುವಾಗ ತನ್ನ ಪ್ರೀತಿಸುವ, ನೊಂದಾಗ ಸಂತೈಸುವ ಇನ್ನೊಂದು ಜೀವ ಬೇಕು ಎಂದು ಹೆಣ್ಣಿನ ಸಂಗವನ್ನು ಮಾಡಿರುವುದು. ಆ ನೆಲವನ್ನು ನೋಡಿದಾಗ ಯಾವುದೇ ತಪ್ಪು ಕಾಣುವುದಿಲ್ಲ. ನಮ್ಮ ದೇಶದ ನೆಲದ ರೀತಿಯಲ್ಲಿ ನೋಡಿದ್ದಾರೆ. ತಪ್ಪು ಆದರೆ ಆ ದೇಶದ ನೆಲದಲ್ಲಿ ನೋಡಿದರೆ ತಪ್ಪು ಇಲ್ಲ. ಅಪ್ಪನ ವಿವಿಧ ಮುಖಗಳನ್ನು ಅವನ ಬದುಕಿನ ಚರ್ಯೆ ಹೇಳುತ್ತಾ ಸಾಗಿದೆ ಅನ್ನಿಸುತ್ತದೆ.

ಅನಾಥ ಮನಸ್ಸುಗಳ ಕಥೆಯಲ್ಲಿ ಸಾಫ್ಟ್‌ವೇರ್ ಉದ್ಯಮಕ್ಕೆ ಸಂಬಂಧಿಸಿದ ಟೌನ್‌ಶಿಪ್ ನಿರ್ಮಿಸಲಾಗುವುದು ಎಂಬ ಸಚಿವರ ಹೇಳಿಕೆಯೇ ಕಾರಣವಾಗಿ ಇಡೀ ಕೆಂಬಳ್ಳಿಯೇ ನಿಜವಾಗಿಯೂ ರಂಗೀನಹಳ್ಳಿಯಾಗಿ ಪರಿವರ್ತಿತವಾದ ಅಲ್ಲಿಯ ಸಾಮಾಜಿಕ ವಿವರಗಳಂತೂ ಬಹಳ ಕುತೂಹಲಕಾರಿಯಾಗಿದೆ. [2]"ಮಧ್ಯರಾತ್ರಿ ಕೊಡೆ ಹಿಡಿದುಕೊಂಡು ಆಸೆಗಣ್ಣಿನಿಂದ ಆಗಸದಲ್ಲಿನ ತಮ್ಮ ತಮ್ಮ ನಕ್ಷತ್ರಗಳನ್ನು ನೋಡುತ್ತಾ ಕುಳಿತುಕೊಂಡಿದ್ದರು". ನೂರಾರು ವರ್ಷಗಳಿಂದ ನೆಲೆ ನಿಂತಿದ್ದ ಬದುಕುಗಳು ಬಿಟ್ಟು ಹೋಗಿರುವುದು ಕೆಂಬಳ್ಳಿಯ ಜನರು ಕನಸಿನ ಮೇಲೆ ಕನಸು ಕಟ್ಟುತ್ತಿರುವುದು ನಮ್ಮೆಲ್ಲರ ಕನಸು ನನಸಾಗುವ ಸಮಯ ಬಂದಿದೆ ಎಂದು ಮಾತನಾಡಿಕೊಳ್ಳುವುದು. ಸರಿಯಾಗಿ ನಿದ್ದೆಯಿಲ್ಲದೇ ನೂರಾರು ಬಣ್ಣಬಣ್ಣದ ಕನಸಿನ ಆಸೆಯನ್ನ ಹೆಂಡತಿ ಮಕ್ಕಳಿಗೆ ತೋರಿಸುತ್ತಿರುವ ಗಂಡಂದಿರು.

ಸೂಟುಬೂಟು ಬಂಗಾರದ ಬ್ರೇಸ್ಲೇಟ್, ಸರಗಳನ್ನ ಹಾಕಿಕೊಂಡು ಓಡಾಡುವ ಜನಗಳು ಹೆಚ್ಚಾಗಿ ಕಾಣಲಾರಂಭಿಸಿದ್ದರು. ಬೇರೆಯವರು ನಮ್ಮ ಜಮೀನು ಒಳ್ಳೆಯ ಬೆಲೆಗೆ ಹೋಗಲಿ ನಾನು ನನ್ನ ಒರಿಜಿನಲ್ ಗೆಟಪ್ ತೋರಿಸ್ತೀನಿ ಎಂದು ಮನಸ್ಸಿನಲ್ಲಿ ಹೇಳಿಕೊಳ್ಳುವುದು. ತೆಲುಗು, ತಮಿಳು, ಮಲೆಯಾಳಿ, ಬಿಹಾರಿಗಳು, ಬೆಂಗಾಲಿಗಳು ಉತ್ತರ ಭಾರತದವರು ಮುಂತಾದ ವಲಸಿಗರ ಆವಾಸ ಸ್ಥಾನವಾಯಿತು. ಎಳನೀರಿಗೂ ಹಳ್ಳಿಯವರೇ ಡಬಲ್ ಹಣಕೊಟ್ಟು ಕುಡಿಯಬೇಕಾದ ಪ್ರಸಂಗ ಬಂದಿತ್ತು.

'ಸೇಲಂನಿಂದ ಕೂಲಿಗಾಗಿ ಬೆಂಗಳೂರಿಗೆ ಬಂದ ಪಳನಿ, ಈಗ ತನ್ನೂರಿನಿಂದ ನಾಲ್ಕೈದು ಹುಡುಗರನ್ನು ಕರೆಸಿಕೊಂಡು ಅವರಿಗೂ ಎಳನೀರು ಮಾರುವ ಕೆಲಸ ಕೊಡುವ ಮಟ್ಟಿಗೆ ಬೆಳೆದಿದ್ದಾನೆ. ವ್ಯವಹಾರಕ್ಕೆ ಬೇಕಾದಷ್ಟು ಕನ್ನಡ, ತೆಲುಗು ಕಲಿತಿದ್ದಾನೆ. ತಾನೂ ಹೇಳಿದಷ್ಟು ಹಣಕ್ಕೆ ಎಳನೀರು ತೆಗೆದುಕೊಳ್ಳುತ್ತಾರೆ ಅನ್ನುವ ಧೈರ್ಯದ ಮೇಲೆ ಕೆಂಬಳ್ಳಿಗೆ ವಲಸೆ ಬಂದ ಮಧ್ಯಮವರ್ಗದ ಜನರಿಗೆ 'ಬೇಕಾದರೆ ತಗೊಳ್ಳಿ ಇಲ್ಲಾಂದ್ರೆ ಬಿಡಿ' ಅಂತ ಧೈರ್ಯವಾಗಿ ಹೇಳುತ್ತಾನೆ.

ಅಷ್ಟರಮಟ್ಟಿಗೆ ಕೆಂಬಳ್ಳಿಯು ಬದಲಾವಣೆಯ ರೂಪಕ್ಕೆ ಬಂದಿತು. ಜನರು ಬದಲಾಗಿ ಅವರ ಬದುಕುಗಳು ಬದಲಾಗಿ ಭೂಮಿಗೆ ಚಿನ್ನದ ಬೆಲೆಗಿಟ್ಟಿಸುವ ಭರದಲ್ಲಿ ಮೂಲದ ಕೆಂಬಳ್ಳಿಯು ಸಾಮಾಜಿಕ ಪರಿಸರ ಗೊಂದಲ ಮಾಯವಾಗಿ ವ್ಯಾಪಾರ ಮನೋವೃತ್ತಿ ಹೆಚ್ಚಾಗಿ ಕಾಣಿಸತೊಡಗಿತ್ತು. ಕೆಂಬಳ್ಳಿಯ ಜನರಿಗೆ ಅವರ ನೈಜ ಬದುಕು ಮಾಯವಾಗಲು ಪ್ರಾರಂಭವಾಯಿತು. ಹಣದ ಆಸೆ ಹೆಚ್ಚಾದಂತೆ ತಮ್ಮಲ್ಲಿ ನಿಜವಾದ ಪ್ರೀತಿ ಈಗ ಕೊಂಡುಕೊಳ್ಳುವ ವಸ್ತುವಿನ ಪ್ರೀತಿಯಾಗಿ ಪ್ರಾರಂಭವಾಯಿತು. ಕೆಂಬಳ್ಳಿಯಲ್ಲಿ ಮೊದಲು ಶಾಸ್ತ್ರ ಸಂಪ್ರದಾಯ ಇದ್ದ ಊರಿನಲ್ಲಿ ಇಂದು ಮಲ್ಟಿಪ್ಲೆಕ್ಸ್‌ಗಳು ಪಬ್‌ಗಳು ಪ್ರಾರಂಭವಾಗಿ ಮೋಜು ತಾಣಗಳ ಊರಿಗೆ ಬಂದಿವೆ. ಮೊದಲೇ ಈ ಊರಿನಲ್ಲಿ ಪ್ರೀತಿ ಪ್ರೇಮಕ್ಕೆ ಬೆಲೆಯಿದ್ದ ಸ್ಥಳದಲ್ಲಿ ಇಂದು ಪ್ರತಿಯೊಂದಕ್ಕೂ ಬೆಲೆಕೊಟ್ಟು ಕೊಂಡುಕೊಳ್ಳುವ ಸ್ಥಿತಿಯನ್ನು ನಾವು ನೋಡಬಹುದು.

ತಮ್ಮ ತನವನ್ನೇ ಮರೆತು ಬೇರೊಂದು ವ್ಯಾಮೋಹದ ನೆಲೆಗೆ ಕಾಲಿಡುತ್ತಿರುವುದನ್ನು ನಾವು ಕಾಣಬಹುದು. ಪ್ರತಿಯೊಂದನ್ನು ವ್ಯಾಪಾರ ವ್ಯವಹಾರ ದೃಷ್ಟಿಯಲ್ಲಿ ನೋಡಿ ಅವರುಗಳು ಕೂತರೂ ನಿಂತರೂ ಪ್ರತಿಯೊಂದಕ್ಕೂ ಬೆಲೆ ಇದೆ ಅನ್ನುವ ಅಭಿಪ್ರಾಯಕ್ಕೆ ಬರುವುದನ್ನು ನಾವು ಕಾಣಬಹುದು.

ರಕ್ತ ಸಂಬಂಧಗಳು ಇಂದು ಬೆಲೆಕೊಡುತ್ತಿರುವುದು ಕೇವಲ ಹಣಕ್ಕಾಗಿ ಚಿಕ್ಕಲಿಂಗಗೌಡ್ರ ಹೆಣ್ಣುಮಕ್ಕಳನ್ನು ವರದಕ್ಷಿಣೆ ನೀಡಿಲ್ಲ ಎಂದು ತವರಲ್ಲಿ ಹೋಗಿದ್ದ ಅಳಿಯ ಕೆಂಬಳ್ಳಿಯ ಆಸ್ತಿ ಕೋಟಿಗೆ ಬೆಲೆಬಾಳುತ್ತದೆ ಎಂದಾಕ್ಷಣ ಆ ಊರಿನ ಅಳಿಯಂದಿರು ತಾವೇ ಸ್ವತಃ ಬಂದು ಅವರನ್ನು ಕರೆದುಕೊಂಡು ಹೋಗುವುದು. ಜೊತೆಗೆ ತಮ್ಮ ಹೆಂಡತಿಯರು ಹೇಳಿದ ಹಾಗೆ ಕೇಳುವ ಪರಿಸ್ಥಿತಿ ಬಂತು. ಮೊದಲೇ ಸೈಕಲ್‌ನಲ್ಲಿ ಓಡಾಡುತ್ತಿದ್ದವರು ಇಂದು ಕಾರಿನಲ್ಲಿ ಓಡಾಡುತ್ತಿದ್ದಾರೆ. ಒಂದು ಕಾಲದಲ್ಲಿ ಅಲ್ಲಿಗೆ ಬಸ್ಸು ಇಲ್ಲದೇ ಜನರು ಪರದಾಡುತ್ತಿದ್ದ ಕಾಲ ಆ ಕೆಂಬಳ್ಳಿ ಜನರನ್ನು ಆಸೆಬುರುಕರಾಗಿದ್ದಾರೆ. ಸ್ನೇಹಿತ ಸ್ನೇಹಿತನನ್ನು ದ್ವೇಷಿಸುವಂತಾಗಿದೆ.

ಕೆಂಬಳ್ಳಿ ತಮ್ಮ ಊರು ಎಂದುಕೊಂಡು ಸ್ವಂತ ಊರನ್ನು ಬಿಟ್ಟು ಶಾಮರಾಯ ಶಾಸ್ತ್ರಿಯವರು ತಮ್ಮ ರಿಟೈರ್‌ಮೆಂಟ್ ಆದ ಮೇಲೆಯೂ ಕೆಂಬಳ್ಳಿಯೇ ತಮ್ಮ ಊರು ಎಂದುಕೊಳ್ಳುವ ಪರಿ ಬೇರೆ. ತಮ್ಮ ಸ್ವಂತ ಊರು ಆದ ಮೈಸೂರಿನಲ್ಲಿ ಮನೆಕಟ್ಟಿಸದೆ ಕೆಂಬಳ್ಳಿಯಲ್ಲಿ ಕಟ್ಟಿಸಿ, ತಮ್ಮ ಮಗ ಹೊಸ ಮನೆ ತೆಗೆದುಕೊಂಡಿದ್ದೇನೆ ಬನ್ನಿ ಎಂದರೂ ಬರದೆ ತಾವು ಇದ್ದ ಊರು ನಾವು ಬರುವುದಿಲ್ಲ ಗೊತ್ತಿಲ್ಲದ ಜಾಗ ಭಾಷೆ ಜನರ ಮಧ್ಯೆ ಬಾಳಲು ತಯಾರಿಲ್ಲ. ಕೊನೆಗೂ ಸರ್ಕಾರ ತಮ್ಮ ಜಮೀನನ್ನು ತೆಗೆದುಕೊಂಡಿದೆ ಎಂದು ಗೊತ್ತಾದ ತಕ್ಷಣ ಅವರು ಹೃದಯಾಘಾತದಿಂದ ಸಾವನ್ನು ಅಪ್ಪುವುದು. ಹೀಗೆ ಬೇರೆಬೇರೆ ಊರಿನಿಂದ ವಲಸೆ ಬಂದ ಜನರು ತಮ್ಮ ಹೊಟ್ಟೆಪಾಡಿಗೆ ನಾನಾ ವೃತ್ತಿಗಳನ್ನು ಮಾಡಿಕೊಂಡು ಬರುತ್ತಿದ್ದು, ಅಲ್ಲಿನ ಬಾಡಿಗೆ ಎಲ್ಲವೂ ದುಬಾರಿಯಾಗಿದೆ. ಇಂದು ಎಳನೀರು ಕುಡಿಯುತ್ತಿದ್ದವರು ಬೀರು ಕುಡಿಯುತ್ತಿದ್ದಾರೆ.

ತಮ್ಮ ಊರು ತಮ್ಮ ಮಣ್ಣು ಎಂಬ ನಂಟನ್ನು ತೊರೆದು ಹೊಸ ಸುಖ ಅರಸಿ ಹೋದ ಬದುಕುಗಳನ್ನು ಹೇಳಿರುವ ಕಥೆಗಾರರು ನೆಲದ ಜೊತೆಗಿನ ಬಾಂಧವ್ಯವನ್ನು ಕಡಿದುಕೊಂಡು ಹೊರಬರುವ, ಹಣದ ಹಿಂದೆ ಬಿದ್ದಿರುವ ಮನುಷ್ಯರ ದುಷ್ಟತೆಯನ್ನು ಎಳೆ ಎಳೆಯಾಗಿ ಬಿಡಿಸಿದ್ದಾರೆ.

[3]"ಜನರ ಮನಸ್ಸುಗಳು ಬದಲಾವಣೆಯ ನೀರನ್ನು ಕುಡಿಯುತ್ತಿವೆ. ಜಾಗತೀಕರಣ ಉದ್ಯಮೀಕರಣದ ಆಹಾರವು ಹೊಟ್ಟೆಯಲ್ಲಿ ತುಂಬಿಕೊಂಡಿರುವುದರಿಂದ ಕೆಂಬಳ್ಳಿಯಂತಹ ಅನೇಕ ಹಳ್ಳಿಗಳು ತಮ್ಮತಮ್ಮ ಮೂಲಬೇರುಗಳನ್ನು ಕಳಚಿಕೊಂಡು ಸ್ವಾತಂತ್ರ್ಯಕ್ಕೆ ಹಪಹಪಿಸುತ್ತಿದ್ದರೂ, ಜನರ ಹಣದ ಅಂತಃಸತ್ವ ಅವರನ್ನು ಕೊಳೆಯುವಂತೆ ಮಾಡಿದೆ. ಒಟ್ಟಿನಲ್ಲಿ ಕತೆಯಲ್ಲಿ ಬಂದ ಒಂದು ಮಾತನ್ನು ಇನ್ನೊಮ್ಮೆ ಹೇಳುವುದಾದರೆ, ಹಳ್ಳಿಯ ಮೂಲಸತ್ವಗಳ ಒಳ ಉಡುಪುಗಳು ಮಣ್ಣು ಸೇರುತ್ತಿವೆ, ಹಳ್ಳಿಯ ಅಭಿವೃದ್ಧಿಯ

ಹೊಸಸೀರೆ ಉಟ್ಟರೂ ದೇಹ ಮಾತ್ರ ಬೆತ್ತಲೆಯಾಗಿದೆ. ಮುಚ್ಚಿಕೊಂಡರೂ ಎಲ್ಲವೂ ಕಾಣುತ್ತಿದೆ. ಬದಲಾವಣೆಯ ನೆಪದಲ್ಲಿ ಹಳ್ಳಿಯ ಮನಸ್ಸುಗಳು ಅನಾಥವಾಗುತ್ತಿವೆ".

ಕಥೆಗಾರರು ಹೇಳಿರುವಂತೆ ಹಳ್ಳಿಯ ಅಭಿವೃದ್ಧಿಯು ಹೊಸ ಸೀರೆ ಉಟ್ಟಿದ್ದು, ದೇಹ ಮಾತ್ರ ಬೆತ್ತಲೆಯಾಗಿದೆ. ಮುಚ್ಚಿಕೊಂಡರೂ ಎಲ್ಲವೂ ಕಾಣುತ್ತಿದೆ. ಸಾಮಾಜಿಕ ಬದಲಾವಣೆಯ ನೆಪದಲ್ಲಿ ಹಳ್ಳಿಗಳು ಅನಾಥವಾಗುತ್ತಾ ಇವೆ.

ಅನುಸೂಯಮ್ಮನ ಗರಡಿ ಮನೆಯ ಕತೆಯಲ್ಲಿ ಬರುವ ಪತ್ರಕರ್ತ ನರಸಿಂಹ ಶೆಟ್ಟಿಗೆ ಬಾಳೆಗುಂಡ, ಪಿಜ್ಜಾರ್‌ಪೇಟೆ ಅನುಸೂಯಮ್ಮನ ಗರಡಿ ಮನೆ ಇವನ ಸಂಶೋಧನಾ ಕಣ್ಣಿಗೆ ಬಿತ್ತು. ಹೆಣ್ಣುಮಕ್ಕಳನ್ನು ದಂಧೆಗೆ ಹಚ್ಚಿದ ಮನೆ ಸುತ್ತಲು ಕತೆ ಹರಿದಾಡುತ್ತದೆ. ಕ್ರೈಂ ರಾಜಕಾರಣ ಮಾಫಿಯಾಗಳು ಕಪ್ಪು ಹಣ, ಸುಖ, ಪೊಲೀಸ್‌ಗಿರಿ ಇಷ್ಟೆಲ್ಲ ವ್ಯವಹಾರಗಳು ನಡೆಯುತ್ತಿದ್ದು, ಹೆಣ್ಣು ತನ್ನ ಹೊಟ್ಟೆ ತುಂಬಿಸಿಕೊಳ್ಳುವಲ್ಲಿ ಹಾಗೆ ದಂಧೆಯನ್ನು ತನ್ನ ಕರ್ತವ್ಯವಾಗಿಸಿಕೊಂಡ ನೋವಿನ ಸಂಗತಿಯನ್ನು ಹೇಳುವಲ್ಲಿ ಕತೆಗಾರರ ಲೇಖನಿಯ ಕಸುವು ತೆರೆದುಕೊಳ್ಳುತ್ತದೆ. ವ್ಯವಹಾರದ ಹಿಂದೆ ಇರುವ ನೋವಿನ ನಿತ್ಯ ಸತ್ಯಗಳನ್ನು ಓದುಗನ ಅನುಭವಕ್ಕೆ ತರುತ್ತಾ ಸಮಾಜ ಹೆಣ್ಣು ಮಕ್ಕಳ ಮೇಲೆ ನಡೆಸುತ್ತಿರುವ ಶೋಷಣೆಯ ರೂಪವನ್ನು ಹೃದಯ ವಿದ್ರಾವಕವಾಗಿ ಚಿತ್ರಿಸಿದ್ದಾರೆ.

ಇತ್ತೀಚಿನ ದಿನಗಳಲ್ಲಿ ನಗರದ ಬಾಳಗುಂಡಾದಲ್ಲಿ ಅಕ್ರಮ ಮರಳುಗಾರಿಕೆ, ಭೂ ಮಾಫಿಯಾ, ರಿಯಲ್ ಎಸ್ಟೇಟ್, ಮಾಂಸದ ದಂಧೆ, ಬಾರು, ಪಬ್ ರೆಸ್ಟೋರೆಂಟ್ ಇವುಗಳಿಂದ ಹಣದ ಹೊಳೆಯು ಹರಿಯುತ್ತಿದ್ದವು. ಇಲ್ಲಿ ಇನ್ನೂ ಕೊಲೆ ದಂಧೆಗಳು ನಡೆದಿದ್ದರೆ, ಪೋಲೀಸ್‌ರು ಲಂಚ ತೆಗೆದುಕೊಂಡು ಈ ಎಲ್ಲಾ ಕೇಸ್‌ಗಳನ್ನು ಮುಚ್ಚಿ ಹಾಕುತ್ತಿದ್ದಾರೆ. ಅದಕ್ಕೆ ರಾಜಾರೋಷವಾಗಿ ಈ ದಂಧೆಗಳು ನಡೆಯುತ್ತಿದ್ದವು. ಹೀಗೆಯೇ ಬಾಳಗುಂಡಾದಲ್ಲಿ ಪಿಜ್ಜಾರ್‌ಪೇಟೆಯಲ್ಲಿ ಅನುಸೂಯಮ್ಮನ ಗರಡಿಮನೆ ಅನೇಕ ವರ್ಷಗಳಿಂದ ಇರುತ್ತದೆ. ಇಲ್ಲಿಗೆ ಬರುವ ಖಾಯಂ ಗಿರಾಕಿಗಳು ಗರಡಿ ಮನೆ ಎಂದು ಕರೆಯುತ್ತಿದ್ದರು. ಈ ಮಾಂಸದ ದಂಧೆಯಿಂದಲೇ ಅವಳ ಬದುಕು 20 ವರ್ಷದಿಂದ ನಡೆಯುತ್ತಲೇ ಇರುತ್ತವೆ. ಇವಳು ಈ ಹಾದರದ ಸಂಬಂಧಕ್ಕೆ ರೌಡಿಗಳನ್ನು ಇಟ್ಟು 30ಕ್ಕೂ ಹೆಚ್ಚು ಹೆಂಗಸರು ಹುಡುಗಿಯರು ಅನುಭವ ಇರುವವರು. ಈ ದಂಧೆಗೆ ಇಟ್ಟುಕೊಂಡಿದ್ದಳು. ಆದರೆ ಇವಳದು ಇನ್ನೊಂದು ಗುಣವಿತ್ತು. ಈ ದಂಧೆಯ ವಿಷಯ ತನ್ನ ಮಕ್ಕಳಿಗೆ ತಿಳಿಯದ ರೀತಿಯಲ್ಲಿ ನೋಡಿಕೊಂಡಿದ್ದಳು.

ಈ ಅನುಸೂಯಮ್ಮನಿಗೆ ಮನೆಗೆ ಬರುವವರೆಲ್ಲ ತಮ್ಮ ಕಾಮವನ್ನು ತೀರಿಸಿಕೊಳ್ಳಲು ತಮ್ಮ ಹೆಂಡತಿಯರಲ್ಲಿ ಸಿಗದ ಸುಖವನ್ನು ಬಯಸಿ ಬರುವವರು ಹೆಣ್ಣುಬಾಕರು ಅಂತ ಬಿಡಿಸಿ ಬೇರೆ ಹೇಳಬೇಕಾಗಿಲ್ಲ. ಹಣ, ಹೆಂಡ, ಹೆಣ್ಣು ಈ ಮೂರು ಸುಖವನ್ನು ಬಯಸಿ ಬರುವವರು, ಇವಳ ದಂಧೆಗೆ ಅನುಕೂಲವಾಗುವಂತೆ ಸ್ವಂತದ ಮನೆಯಲ್ಲಿ ವ್ಯವಹಾರ ನಡೆಸುತ್ತಿದ್ದಳು. ಹಾಗೆಯೇ ವ್ಯವಹಾರವನ್ನೆಲ್ಲ ಇವಳೇ ನೋಡಿಕೊಳ್ಳುತ್ತಿದ್ದಳು. ಗಂಡಸರು ಸುಖಪಡೆದು ಅನುಸೂಯಮ್ಮಗೆ ದುಡ್ಡುಕೊಡುತ್ತಿದ್ದರು. ನಂತರ ಸುಖಕೊಟ್ಟ ಮಾನಿನಿಯರಿಗೆ

ಒಂದಿಷ್ಟು ಹಣಕೊಡುತ್ತಿದ್ದಳು. ಹಾಗೆಯೇ ಅಲ್ಲಿಯ ಮನೆ ಸಾಮಾನ್ಯದಂತೆ ಕಂಡರೂ ಅಲ್ಲಿ ಸುಂದರ ಗರತಿಯರು ಇದ್ದರೂ ಹಾಗೆಯೇ ಈ ವಾರ್ಡ್‌ನಲ್ಲಿ ಏನಾದರೂ ಸಮಸ್ಯೆ ಬಂದರೆ ಸಾಕು 2-3 ಮೂರು ಫೋನ್‌ನಲ್ಲಿ ವಾರ್ಡ್‌ನ ಸಮಸ್ಯೆ ಎಲ್ಲಾ ಮುಗಿಯುತ್ತಿತ್ತು. ಅಲ್ಲಿನ ಹೆಂಗಸರು ಹೊರಗೆ ಅಕ್ಕ ಎಂದು ಕರೆದು ಒಳೊಳಗೆ ಬೈಯ್ದುಕೊಳ್ಳುತ್ತಿದ್ದರು. ನಮ್ಮ ಗಂಡಂದಿರನೆಲ್ಲಾ ಹಾಳುಮಾಡುತ್ತಾಳೆ ಎಂದು.

ಹೀಗೆಯೇ ದಂಧೆಯು ರಾಜಧಾನಿಯ ಮಟ್ಟದಲ್ಲಿ ವ್ಯವಹಾರ ಆರಂಭವಾಯಿತು. ಸಾಫ್ಟ್‌ವೇರ್ ಕ್ರಾಂತಿಗಳು ಸ್ವಲ್ಪ ಹೈಟೆಕ್ ಮೆರುಗನ್ನು ನೀಡಿದ್ದವು. ಹುಡುಗರು ಅನುಸೂಯಮ್ಮನ ನಂಬರ್ ತೆಗೆದುಕೊಂಡು ಫೋನ್ ಮಾಡಿ ಕರೆಯುತ್ತಿದ್ದರು. ಹರೆಯದ ಹುಡುಗರಿಗೆ ಚೆಂದನೆಯ ಹುಡುಗಿಯರಿಗಿಂತ ಮೂವತ್ತರ ಆಂಟಿಯರ ಜೊತೆ ಸರಸ ಚಪಲದಲ್ಲಿ ಖುಷಿ ಇರುತ್ತಿತ್ತು. ಹುಡುಗರ ಕಡೆಯಿಂದ ಹೆಚ್ಚಾಗಿ ಹೆಂಗಸರಿಗೆ ಡಿಮ್ಯಾಂಡ್ ಅಂಕಲ್‌ಗಳಿಗೆ ಹುಡುಗಿಯರ ಹುಚ್ಚು ಹಾಗೆಯೇ ಒಬ್ಬ ಹುಡುಗಿಯನ್ನು ಕರೆದುಕೊಂಡು ನಾಲ್ಕಾರು ಹುಡುಗರು ಹಂಚಿಕೊಳ್ಳುತ್ತಿದ್ದರು. ಬಾಳಗುಂಡಾದಲ್ಲಿ ಈ ರೀತಿಯ ದಂಧೆಯ ಬಗ್ಗೆ ನರಸಿಂಹ ಶೆಟ್ಟರಿಗೆ ಸಾಕಷ್ಟು ಮಾಹಿತಿಗಳು ಇತ್ತು. ಹೇಳಲು ಯಾರಿಗೂ ಧೈರ್ಯವಿರಲಿಲ್ಲ. ಹೊಲಸಿನ ನಡುವೆ ಮುಚ್ಚಿಹೋಗಿದ್ದರು. ಇನ್ನು ಕೆಲವರು ಜೊಲ್ಲು ಸುರಿಸುತ್ತಿದ್ದರು. ಈ ವಿಷಯಗಳು ಬಾಳಗುಂಡಾದಲ್ಲಿ ನಡೆಯುತ್ತಿರುವ ದಂಧೆ ಯಾವತ್ತೂ ಮಾಧ್ಯಮಗಳಿಗೆ ಸಿಗಲಿಲ್ಲ. ಈ ವಿಚಾರವನ್ನು ತಿಳಿಯಲು ಹಿಂದಿನ ಕಾರಣಗಳನ್ನು ಬಿಚ್ಚಿಡುವ ಪ್ರಯತ್ನಕ್ಕೆ ನರಸಿಂಹಶೆಟ್ಟಿ ಮನಸ್ಸು ಮಾಡುತ್ತಾರೆ.

ಬಾಳಗುಂಡಾ ಸಣ್ಣಪುಟ್ಟ ಕೆಲಸ ಮಾಡಿಕೊಂಡು ಬಂದವರು. ಮರಳು ಲಾರಿಯವರು ದಿನ ಪೂರ್ತಿ ದುಡಿದು ಐನೂರು ರೂಪಾಯಿ ಸಂಬಳದಲ್ಲಿ ನೈಂಟಿ, ವಿಸ್ಕಿ ಹತ್ತಾರು ನಿಮಿಷಗಳ ಸುಖಕ್ಕೆ ಹುಡುಗಿಯರ ಸಹವಾಸಕ್ಕೆ ಬೀಳುತ್ತಿದ್ದರು. ಗರಡಿ ಮನೆಯಿಂದ ಕೆಲವು ಹುಡುಗಿಯರು ಹೆಂಗಸರು ಹೊರವರ್ತುಲ ರಾಷ್ಟ್ರೀಯ ಹೆದ್ದಾರಿಯ ಕಡೆ ಬರುತ್ತಿದ್ದರು. ಮರಳು ಲಾರಿಯ ಕಡೆ ಹೋಗಿ ಕಾಮದ ಆಸೆಯನ್ನು ತೋರಿಸುತ್ತಿದ್ದರು. ಅವರು ತಮ್ಮ ಲಾರಿಯ ಮರಳಿನ ಮೇಲೆ ತಮ್ಮ ಕಾಮದ ದಾಹ ತೀರಿಸಿಕೊಳ್ಳುತ್ತಿದ್ದರು.

ಹೊರವರ್ತುಲ ರಸ್ತೆ ಬದಿಗಳಲ್ಲಿ ತುಟಿಗೆ ಲಿಪ್‌ಸ್ಟಿಕ್ ಮೇಕಪ್ ಮಾಡಿಕೊಂಡು ಎದೆಯ ಮೊಲೆಗಳು ಕಾಣಿಸುವಂತೆ ನಗುಬೀರುತ್ತ, 'ಒಳಗೆ ಬಾ ತೋರಿಸ್ತೀನಿ' ಎಂದು ರಸ್ತೆಯಲ್ಲಿ ಕಾರು, ಬೈಕ್‌ನಲ್ಲಿ ಹೋಗುವವರನ್ನು ಕರೆಯುತ್ತಿದ್ದರು. ಅವರಿಗೆ ಏನಾದರೂ ಮಳೆ ಬಂದರೆ ವ್ಯಾಪಾರವೇ ಆಗುತ್ತಿರಲಿಲ್ಲ. ಅವರ ಮೇಕಪ್ ಎಲ್ಲಾ ಹಾಳಾಗುತ್ತಿತ್ತು. ಆಗ ಮಳೆರಾಯನಿಗೆ ಶಾಪ ಹಾಕುತ್ತಿದ್ದರು.

[4]"ಅಬ್ಬಾ...! ನೆಲನಂಬಿ ಬದುಕೋನಿಗೆ ಮಳೆಯೇ ಜೀವನವಾದರೆ, ನೆಲದಲ್ಲಿ ಅಡ್ಡಾಯಿಸಿಕೊಂಡು ಬಿದ್ದು ಸುಖಪಡೋರಿಗೆ ಮಳೆಯೇ ಬದುಕು ತೇಲಿಸುತ್ತದೆ... ಒಬ್ಬೊಬ್ಬರದ್ದು ಒಂದು ರೀತಿ...? ಈ ತಪ್ಪು ಸರಿಗಳ ಎಣಿಕೆಯಲ್ಲಿ ಎಲ್ಲರೂ ದಡ್ಡರೇ...".?

ಅಲ್ಲಿನ ಕೆಲವು ಖಾಯಂ ವೇಶ್ಯೆಯರು ಒಪ್ಪಂದ ಮಾಡಿಕೊಂಡಿದ್ದರು. ಮರಳುಗಾಡಿ ಸಣ್ಣಪುಟ್ಟ ಕೆಲಸದವರಿಗೆ ಅಲ್ಲಿ ಮರಳಗಾಡಿನಲ್ಲಿ ಕಂಪನಿ ಶ್ರೀಮಂತ ವ್ಯಕ್ತಿಗಳಗೆ ಮೆತ್ತನೆಯ ಬಸ್ ಸೀಟುಗಳು, ಎಷ್ಟು ಜನ ಹೆಣ್ಣಿನ ಮೈರುಚಿ ನೋಡದ ಗಂಡಸರು ಕೆಲವು ಸಾರಿ ಮೊಬೈಲ್ ಪರ್ಸ್, ಹಣ ಚಿನ್ನ ಕಳೆದುಕೊಂಡು ಹೋಗಿದ್ದಾರೆ. ಯಾರ ಹತ್ತಿರ ಹೇಳಿದರೆ ಮರ್ಯಾದೆ ಹೋಗುತ್ತದೆ ಎಂದು ಸುಮ್ಮನಾಗಿ ಬಿಟ್ಟಿದ್ದಾರೆ. ಈ ಹುಡುಗಿಯರಿಗೆ ಕಾವಲಾಗಿ ಕೆಲವು ರೌಡಿಗಳು ಇರುತ್ತಿದ್ದರು. ಇವರಿಗೆ ತೊಂದರೆಯಾದರೆ ಅವರುಗಳು ಬಂದುಬಿಡುತ್ತಿದ್ದರು. ಹೆಣ್ಣಿನ ಮೇಲೆ ಎಷ್ಟು ದೌರ್ಜನ್ಯ ನಡೆಯುತ್ತಿತ್ತು ಎಂದರೆ ರೌಡಿಗಳು ಅವರ ಮೇಲೆ ಮಾನಭಂಗ ಮಾಡುತ್ತಿದ್ದರು, ಬಾಳಗುಂಡಾದಲ್ಲಿ ಲೈಂಗಿಕತೆಗೆ ಕಾಂಡೋಮ್‌ನ್ನು ಬಿ.ಬಿ.ಎಂ.ಪಿ.ಯವರು ಉಚಿತವಾಗಿ ಕೊಡುತ್ತಿದ್ದರು. ದಂಥೆಗೆ ಅನುಸೂಯಮ್ಮನ ಗರಡಿ ಮನೆ ಕಾರಣವಾಗಿತ್ತು.

ವೇಶ್ಯಾವೃತ್ತಿಗಿಳಿದ ಹೆಣ್ಣುಗಳು ಮೈಯಲ್ಲಿ ರಕ್ತಮಾಂಸ ಗಟ್ಟಿ ಇರುವಾಗಲೇ ದುಡಿಯಬೇಕು, ಇಲ್ಲವಾದರೆ ವಯಸ್ಸಾದ ಮೇಲೆ ನಮ್ಮನ್ನು ಯಾರು ನೋಡಿಕೊಳ್ಳುತ್ತಾರೆ, ನಮಗೆ ಯಾರಿದ್ದಾರೆ ಮುಂದೆ ಎಂದು ವೇಶ್ಯಾವೃತ್ತಿಗಿಳಿದ ಹೆಣ್ಣುಗಳ ಮನದಾಳದ ನೋವಿಗೆ ಕನ್ನಡಿ ಹಿಡಿಯುವ ಕೆಲಸವನ್ನು ಪತ್ರಕರ್ತ ನರಸಿಂಹಶೆಟ್ಟಿ ಮಾಡುತ್ತಾನೆ.

ಇವರಿಗೆ ಗಿರಾಕಿಗಳೇ ಮೂಲ ಆಧಾರ. ಏನಾದರೂ ಚಿಕ್ಕಹುಡುಗರು ಬಂದರೆ ಯಾವುದೇ ತೊಂದರೆ ಇರುವುದಿಲ್ಲ. ಅವರಿಗೆ ಏನೂ ಗೊತ್ತಿರುವುದಿಲ್ಲ. ತುಂಬಾ ನೋವು ಆಗುವುದಿಲ್ಲ ಏನಾದರು ಅನುಭವದ ವ್ಯಕ್ತಿ ಬಂದರೆ ಇವರನ್ನು ಹಿಪ್ಪೆ ಮಾಡಿಬಿಡುತ್ತಾರೆ. ಅವರ ಭಾರವನ್ನು ತಡೆಯಲೂ ಆಗದೆ ರಾತ್ರಿ ಸೊಂಟನೋವು, ಬೆನ್ನುನೋವು, ಮೈಕೈನೋವು ಅಂತ ನರಳುತ್ತಾರೆ. ಅದಕ್ಕೆ ಈ ನೋವನ್ನುಮರೆಯಲು ಮತ್ತೆ ಬೆಳಗ್ಗೆ ಇವರಿಗೆ ಕೆಲಸ ಮಾಡಬೇಕು ಅದಕ್ಕೆ ಅವರು ಕುಡಿಯುತ್ತೇವೆ ಎಂದು ಮಲ್ಲಿಕಾ ತಮ್ಮ ಬದುಕಿನ ಚಿತ್ರವನ್ನು ಹೇಳುತ್ತ ಹೋಗುತ್ತಾಳೆ. ಇವರಿಗೂ ಇವರದೇ ಆದ ಬದುಕು ಇರುತ್ತದೆ. ಅದನ್ನು ಹೇಳಿಕೊಳ್ಳಲು ಯಾರು ಇವರಿಗೆ ಸರಿಯಾದ ಸಂಗಾತಿ ಇರುವುದಿಲ್ಲ.

[5]"ನಮಗೂ ಮದುವೆ-ಸಂಸಾರ, ಮಕ್ಕಳು ಅನ್ನುವ ಎಲ್ಲಾ ಚಿಂತೆಗಳು ಉಂಟು, ನಾವು ಮನುಷ್ಯರಲ್ಲವೇ; ನಮಗೂ ಆಸೆಯಿರುವುದಿಲ್ಲವೇ? ನಾವು ನಿಮ್ಮಂತೆ ಒಳ್ಳೆಯ ಅಪ್ಪ-ಅಮ್ಮಂದಿರಿಗೆ ಹುಟ್ಟಿಲ್ಲವೇ" ಅಂತ ಒಂದುಕ್ಷಣ ಹೇಳಿ ಮೌನವಾದಳು. ಬಡತನ ಈ ದಂಥೆಗೆ ತಳ್ಳಿದೆ.

ಇವರಿಗೆ ಹೊಟ್ಟೆಯ ಹಸಿವು ಆದರೆ ಗಂಡಸರಿಗೆ ಕಾಮದ ಹಸಿವು ಇದೆ. ಹಾಗೆ ಹಸಿದು ಬಂದವರಿಗೆ ಊಟ ಹಾಕುತ್ತಾರೆ. ಅವರು ದುಡ್ಡನ್ನು ಬಿಸಾಕಿ ಇವರ ಅನ್ನಕ್ಕೂ ದಾರಿಯಾಗುತ್ತಾರೆ. ಇದು ತಪ್ಪು ಎನ್ನುವವರು ಈ ಜಾಗದಲ್ಲಿ ನಿಂತು ನೋಡಿದರೆ ಅರಿವಾಗುತ್ತದೆ.

[6]"ನಮ್ಮ ಕೆಲಸವನ್ನು ಬಯ್ಯುವವರೆಲ್ಲರೂ ನಮ್ಮನ್ನು ಸಾಕಲು ಯೋಗ್ಯತೆ ಇಲ್ಲದವರು... ನೆಲ ಉಳೋನಿಗೆ ನೆಲದ ನೋವು ಏನು ಅಂತ ಅರ್ಥವಾಗುತ್ತೇ ತಿಂದು ತೇಗಿ ಉಳ್ಳಾಡುವವರಿಗಲ್ಲ? ಎಲ್ಲರೂ ಅವರವರ ಯೋಗ್ಯತೆಗೆ ತಕ್ಕಂತೆ ಮಾಡನಾಡುತ್ತಾರೆ".

ಇವರು ಕುಡಿತಾರೆ, ಸಿಗರೇಟು ಸೇದುತ್ತಾರೆ ಇವರು ದಿನಪೂರ್ತಿ ಕೆಲಸ ಮಾಡಿ ಬಂದಾಗ ನಿದ್ದೆ ಬರುವುದಿಲ್ಲ. ನಿದ್ದೆ ಬಂದಿಲ್ಲ ಎಂದರೇ ಬೆನ್ನುನೋವು, ಸೊಂಟನೋವು ಹೀಗೆ ರಾತ್ರಿಯಲ್ಲಿ ನರಳಬೇಕು. ಅದಕ್ಕೆ ಇದೆಲ್ಲಾ ಮಾಡುತ್ತೇವೆ. ಇಲ್ಲದಿದ್ದರೆ ಇವರು ನಾಳೆಯ ಕೆಲಸಕ್ಕೆ ಹೋಗುವುದಕ್ಕೆ ಆಗುವುದಿಲ್ಲ ಎಂದು ಹೇಳುತ್ತಾಳೆ ಮಲ್ಲಿಕಾ.

[7]"ಹಾಗೆಯೇ ಅತ್ಯಾಚಾರಗಳು ನಮ್ಮ ಮೇಲೆ ಆಗುತ್ತಿವೆ. ಸೂರ್ಯಂಗೆ ಟಾರ್ಚಾ ಅನ್ನೊ ಹಾಗೆ, ಸೂಳೆಗೂ ರೇಪಾ? ಅನ್ನೋ ಮಾತು ತುಂಬಾ ಕಾಮಿಡಿ ಆಗಿಬಿಟ್ಟಿದೆ. ಪ್ರತಿದಿನ ನಮ್ಮ ಮೇಲೆ ಅತ್ಯಾಚಾರ ಆಗುತ್ತಿದೆ. ಹೆಂಗಸರು ಹೆಂಗಸರ ಮೇಲೆ ಅತ್ಯಾಚಾರ ಮಾಡುತ್ತಿದ್ದಾರೆ. ಇಡೀ ಸಮಾಜ, ಯಾವುದನ್ನು ನಮಗೆ ಖುಷಿಯಾಗಿ ನೀಡಿದೆ. ನಮ್ಮ ಮೇಲೆ ಶೋಷಣೆಯ ರೂಪದಲ್ಲಿ ಅತ್ಯಾಚಾರ ಮಾಡುತ್ತಿದ್ದಾರೆ, ಇದು ನಮ್ಮ ಯೋನಿ ಮಾರ್ಗವನ್ನು ಸೀಳುವ ಅತ್ಯಾಚಾರವಲ್ಲ, ಅವರು ನಮ್ಮ ಹೃದಯಮನಸ್ಸಿನ ಗೋಡೆಯನ್ನು ಒಡೆದು ನುಗ್ಗುತ್ತಿದ್ದಾರೆ. ತಮಗೆ ಬೇಕಾದುದನ್ನು ದೋಚಿಕೊಂಡು ಓಡಿಹೋಗುತ್ತಿದ್ದಾರೆ. ದುಡ್ಡುಕೊಟ್ಟು ಅನುಭವಿಸುವ ಮಾಮೂಲಿ ಗಿರಾಕಿಗಳ ಜೊತೆಗೆ ಬಿಟ್ಟಿಯಾಗಿ ಸಿಗುವ ನಮ್ಮಂತಹವರ ಎದೆಸೀಳುವ ಪೋಲೀಸ್ ಅಧಿಕಾರಿಗಳು, ರೌಡಿಗಳು ಮಾಡುವ ಅತ್ಯಾಚಾರ ಈ ಮಾನಸಿಕ ಅತ್ಯಾಚಾರಕ್ಕೆ ಉತ್ತರ ಹೇಳುವಿರಾ ನಿಮ್ಮಂತ ಮಾಧ್ಯಮ ಮಿತ್ರರು...?

ಮಲ್ಲಿಕಾ ತನ್ನ ಅಂತರಾಳದ ನೋವನ್ನು ಹೇಳಿಕೊಳ್ಳುತ್ತಾ ಹೋಗುತ್ತಾಳೆ. ಶೋಷಣೆಯ ನಿಜವಾದ ಅತ್ಯಾಚಾರ ಎಂದರೆ, ದೇಹದ ಅತ್ಯಾಚಾರಕ್ಕಿಂತ ನನ್ನ ಜೊತೆ ಅಡ್ಜಸ್ಟ್ ಆಗಬೇಕು. ನಾನು ಕರೆದಲ್ಲಿ ಬರಬೇಕು ಎನ್ನುವ ಬೆದರಿಕೆ ಮಾತುಗಳು ಮಾನಸಿಕ ನೋವಿಗೆ ಕಾರಣವಾಗಿತ್ತು.

ಹೆಂಡತಿ ಗಂಡನ ಮೇಲೆ ಪೋಲೀಸ್ ಅಧಿಕಾರಿಗಳು, ಕಾನ್‌ಸ್ಟೇಬಲ್‌ಗಳ ಮೇಲೆ ರಾಜಕೀಯದವರು, ಜನರ ಮೇಲೆ ಸ್ವಾಮೀಜಿಗಳು ರೌಡಿಗಳು, ಮುಂತಾದವರುಗಳು ಅಮಾಯಕರ ಮೇಲೆ ಸಮಾಜದ ಮೇಲ್ವರ್ಗದ ಜನರಲ್ಲಿ ಕೆಳಗಿನವರ ಮೇಲೆ ಮಾನಸಿಕವಾಗಿ ಅತ್ಯಾಚಾರ ಶೋಷಣೆ ಮಾಡುತ್ತದೆ. ನಾವು ನಮ್ಮ ಮನೆ ಆಫೀಸು ಹೊರಗಡೆಯ ಸಮಾಜದಲ್ಲಿ ಮೇಲಿನವರಿಂದ ಈ ರೀತಿಯ ಅತ್ಯಾಚಾರಕ್ಕೆ ಒಳಗಾಗುತ್ತಿರುವಾಗ ನಮಗಿಂತ ಅನುಸೂಯಮ್ಮನ ಗರಡಿ ಮನೆಗಳೇ ಎಷ್ಟೋ ವಾಸಿ ಅನ್ನುವುದು ಮಲ್ಲಿಕಾಳ ಮಾತುಗಳಲ್ಲಿ ಸ್ಪಷ್ಟವಾಗಿತ್ತು.

ದೈಹಿಕ ಅತ್ಯಾಚಾರದ ಜೊತೆಗೆ ಮಾನಸಿಕ ಅತ್ಯಾಚಾರವನ್ನು ಅನುಭವಿಸುತ್ತಿರುವವರ ಬದುಕುಗಳನ್ನು ಮಾಧ್ಯಮಗಳು ಸಮಾಜದ ಜವಾಬ್ದಾರಿಯುತ ವ್ಯಕ್ತಿಗಳು ಬಯಲಿಗೆ ಎಳೆಯಬೇಕು ಎಂಬ ಮಲ್ಲಿಕಾಳ ಕೂಗು ಕತ್ತಲೆಯ ಆಳದಲ್ಲಿ ಹುದುಗಿ

ಹೋಗುವುದನ್ನು ಬಹಳ ವಾಸ್ತವ ನೆಲೆಯಲ್ಲಿ ಹೇಳಿದ್ದಾರೆ. ಈ ಅತ್ಯಾಚಾರ ಸಮಾಜದ ತಳ ನೆಲೆಯವರು ಮೇಲೆ ಎಲ್ಲಾ ಕ್ಷೇತ್ರಗಳಲ್ಲಿಯೂ ಆಗುತ್ತಿರುವುದು ನಿಜ.

ಪುಟ್ಟ ಬಾಲಕ ರಾಮುಗೆ ಅಪ್ಪನ ಕಂಡರೆ ಪ್ರೀತಿ ಇದ್ದರೂ, ಅಪ್ಪನು ಬರುವನೆಂದರೆ ರಾತ್ರಿ ಬೇಗ ಹಾಸಿಗೆ ಸೇರುತ್ತಿದ್ದ. ಚೆನ್ನಾಗಿ ಕುಡಿದು ಬಂದು ಅಮ್ಮನಿಗೂ ರಾಮುವಿಗೂ ತುಂಬ ನೋವು ಮಾಡುತ್ತಿದ್ದ. ರಾಮುವಿಗೆ ಇದರಿಂದ, [8]"... ಓ ದೇವರೇ, ಯಾಕಪ್ಪ ನಂಗೆ ಇಂಥಾ ಅಪ್ಪನ್ನ ಕೊಟ್ಟೆ... ಯಾಕಪ್ಪಾ ... ನನ್ನ ಮ್ಯಾಲೆ ನಿಂಗೆ ಈ ನಮ್ಕಿ ಸಿಟ್ಟು...! ನನ್ನ ಮ್ಯಾಲೇ ನಿಂಗೆ ಕರುಣೇನ ಇಲ್ವಾ..? ಇಷ್ಟು ಚಿಕ್ಕವ ಇದ್ದೀನಿ... ಆ ನಮ್ಗೆ ದನಬಡಿದಾಗ ಹೊಡಿತಾನ... ಸ್ವಲ್ವಾನೂ ಕರುಣೆನೇ ಇಲ್ವಾ...? ಓ ದ್ಯಾಪ್ರೇ ನನ್ನ ಮ್ಯಾಲೆ ಒಂಚೂರಾದ್ರೂ ಕರುಣೆ ತೋರ್ಸಪ್ಪ...! ಅಂತ ತೆಂಗಿನ ಮರದ ಮುಂದೆ ಹೇಳಿಕೊಳ್ಳುತ್ತಿದ್ದನು.

ಮೂರು ವಾರದ ಕೊನೆಯ ದಿನ ಮನೆಗೆ ಬಂದು ಪ್ರಾಣ ಹಿಂಡುತ್ತಿದ್ದ ವಿಪರೀತ ಕುಡಿತ-ಬಡಿತಗಳಿಂದ ಮಕ್ಕಳನ್ನು ದಂಡಿಸಿ, ಅಭ್ಯಾಸವಾಗಿತ್ತು, ತನ್ನ ತಾಯಿ ರಾತ್ರಿ ಅಪ್ಪ ತಿಂದುಬಿಟ್ಟ ಆರಿದ ತಟ್ಟೆಗೆ ಕೈಹಾಕಿ ಉಣ್ಣತೊಡಗಿದಳು. ಅಮ್ಮ ಯಾವತ್ತು ಬೇಸರ ಮಾಡಿಕೊಳ್ಳದೆ ಸುಮ್ಮನೆ ಸಹಿಸಿಕೊಳ್ಳುತ್ತಾ ಇದ್ದಳು.

ರಾಮುವಿಗೆ ತನ್ನ ಸ್ನೇಹಿತರ ತಂದೆಯಂತೆ ನನ್ನ ಅಪ್ಪ ಯಾಕೆ ಇಲ್ಲ ಎಂಬ ಗೋಳು. ಅವನು ಶಾಲೆಗೆ ಹೋದಾಗ [9]"ಏನ್ಲೇ ಇದು ನಿಮ್ಮಪ್ಪನ ರೌದ್ರಾವತಾರ ನಿಮ್ಮ ಅಮ್ಮನಿಗೆ ಹೇಳಿ ಕುಡಿಯೋದು ಕಡಿಮೆ ಮಾಡಿಸಲಿಕ್ಕೆ ಆಗುವುದಿಲ್ಲವೇನೋ" ಅಂತ ಹೇಳುತ್ತಿದ್ದರು.

"ಕುಡುಕನ ಮಗ" ಎಂಬ ಶಬ್ದ ತುಂಬ ಕಿರಿಕಿರಿ ಮಾಡುತ್ತಿತ್ತು. ಈ ಮನೆಯ ಪರಿಸ್ಥಿತಿಯಿಂದ ಅಕ್ಕ ದೊಡ್ಡಮ್ಮನ ಮನೆಯಲ್ಲಿ ವಿದ್ಯಾಭ್ಯಾಸ ಪ್ರಾರಂಭಿಸಿದಳು. ಅಪ್ಪನ ಕುಡುಕತನವನ್ನು ಬಿಡುಸುವ ಪ್ರಯತ್ನ ಮಾಡಿದ್ದರು. ರಾಮು ಅಪ್ಪ ಚಟವನ್ನು ಬಿಡುತ್ತಾರೆ ಎಂಬ ಆಸೆಯನ್ನು ಇಟ್ಟುಕೊಂಡಿದ್ದ. ಆದರೆ, ಕುಡುಕತನವನ್ನು ಬಿಡಿಸುವ ಪ್ರಯತ್ನ ವಿಫಲವಾಗುತ್ತದೆ. ಅದಕ್ಕೆ ಅವರ ದೊಡ್ಡಮ್ಮ ಅವರ ಅಮ್ಮನಿಗೆ [10]"ಅವ ಉದ್ದಾರ ಆಗೊಲ್ಲ, ಹಂಗೆ ಕುಡಿದು ಕುಡಿದು ಸಾಯ್ಲಿ ಬಿಡು, ಮುಂಡೆ ಆಗ್ತೀನಿ ಅಂತ ಹೆದ್ರಬ್ಯಾಡ... ಇಷ್ಟುವರ್ಷ ಅವ ಇದ್ರೂ ಇಲ್ದಂಗ ಬದುಕಿದೀಯಾ... ಇನ್ ಸತ್ತ ಮ್ಯಾಲೂ ಹಾಗೆ ಇದ್ದು ಬಿಡು... ನಿನ್ನ ಜೀವನಕ್ಕೆ ಅಂತ ಸರ್ಕಾರದಿಂದ ಸ್ವಲ್ಪ ವಿಧವಾ ವೇತನಾ ಬರುತ್ತೆ. ನಾ ಅದನ್ನೆಲ್ಲಾ ಮಾಡಿಸಿಕೊಡ್ತೀನಿ... ಮಕ್ಕಳ ಚಿಂತಿ ಬಿಡು, ನಾನು ನಿನ್ನ ಇಬ್ರ ಮಕ್ಳನ್ನು ಓದಿಸುತ್ತೇನೆ. ಮಗ್ಳಿಗೆ ಒಳ್ಳೆ ಸಂಬಂಧ ಬಂದ್ರ ಲಗ್ನಾನೂ ಮಾಡಿಸ್ತೀನಿ, ಹೆದ್ರಬ್ಯಾಡ ಇರಷ್ಟು ದಿನ ನಿನ್ನ ಗಂಡ ಕುಡ್ಕೊತಾ ಹಾಗೆ ಇರ್ಲಿ... ಸತ್ ಮ್ಯಾಲಾದ್ರೂ ಅವಂಗ ತನ್ನ ತಪ್ಪಿನ ಅರಿವಾಗ್ಲಿ..."

ದೊಡ್ಡಮ್ಮ ಆ ರೀತಿ ಹೇಳಿದ ಕೆಲವು ದಿನಗಳ ನಂತರ ದಿನೇ ದಿನೇ ಅಪ್ಪನ ಆರೋಗ್ಯ ಹದಗೆಟ್ಟು ಒಂದು ದಿನ ಕಣ್ಣುಮುಚ್ಚಿದ. ಅಮ್ಮ ಬಾರದ ಅಳುವನ್ನು ತಂದುಕೊಂಡಿದ್ದಳು. ಅಪ್ಪ ತಾನಾಗಿಯೇ ಸತ್ತನೋ? ಅಥವಾ ಆತ್ಮಹತ್ಯೆಯೊ ಎಂಬ ಪ್ರಶ್ನೆ

ಮಗನಿಗೆ ಕಾಡಿದ್ಧಿತು. ಅಮ್ಮ ಅಪ್ಪನ ಸಾವನ್ನು ಎದುರು ನೋಡುತ್ತಿದ್ದಳು ಎಂಬುದು ಗೊತ್ತಿದ್ದರೂ ಅಪ್ಪನ ಬಗ್ಗೆ ಇದ್ದ ಪ್ರೀತಿ ಸಹನೆ ಕಂಡು ಮಗನಿಗೆ ಅದನ್ನು ಪ್ರಶ್ನಿಸುವ ಧೈರ್ಯ ಸಾಲಲಿಲ್ಲ. ಅಮ್ಮನ ಕಣ್ಣಿನಲ್ಲಿ ಕನಸುಗಳು ಬತ್ತಿಹೋದವು.

ಊರಿನ ಜನ ಯಾವುದೇ ಆತ್ಮಹತ್ಯೆ ಜೊತೆಗೆ ಕೊಲೆ ಮುಂತಾದ ಆಕಸ್ಮಿಕ ಸಾವುಗಳನ್ನು ಡಾಕ್ಟರ್ ಅಥವಾ ಪೊಲೀಸ್‌ರವರಿಗೆ ತೆಗೆದುಕೊಂಡು ಹೋಗುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಒಮ್ಮೆ ಪೂಜಾರಿ ಹನುಮಂತಪ್ಪ ಕೊಲೆಯಾಗಿದ್ದ ಆ ಹೆಣವನ್ನು ಪೊಲೀಸ್‌ಗೆ ತಿಳಿಸದೇ ಹೂತು ಹಾಕಿದ್ದ ವಿಷಯ ತಿಳಿದು ಪೊಲೀಸ್‌ರು ಹೆಣವನ್ನು ಹೊರಗಡೆ ತೆಗೆದರು. ಪೋಸ್ಟ್‌ಮಾರ್ಟಂ ಮಾಡಲಿಕ್ಕೆ ಮುಂದಾದರು. ಪೋಸ್ಟ್‌ಮಾರ್ಟಂ ಎಂದರೆ ಏನು? ಎಂಬುದೇ ಗೊತ್ತಿಲ್ಲದ ಊರನವರಿಗೆ ಹೆಣ ಕೊಯ್ಯುವುದು ಎಂದರು ಯಾರಿದ್ದರು ನಿಮ್ಮೂರಿನಲ್ಲಿ ಹೆಣ ಕುಯ್ಯುವವರು ಇದ್ದಾರಾ ಎಂದು ಪೊಲೀಸ್ ಪ್ರಶ್ನಿಸಿದಾಗ ಎಂಕ್ಟಣ್ಣ ಮಾಡಬಹುದು ಎಂದು ಕೆಲವು ಹೇಳಿದ್ದರು. ಎಂಕ್ಟಣ್ಣ ಇದುವರೆವಿಗೂ ಕೇವಲ ಪ್ರಾಣಿಗಳ ದೇಹ ಕುಯ್ದು ಚರ್ಮ ಸುಲಿಯುತ್ತಿದ್ದವನು, ಹೆಣ ಕುಯ್ಯುವುದು ಒಪ್ಪಲಿಲ್ಲ, ಆಗ ಹೆಂಡ ಕುಡಿಸಿ, ದುಡ್ಡು ಕೊಟ್ಟು ಪುಸಲಾಯಿಸಿ ಆತವನನ್ನು ಊರಿನ ಮಂದಿ ಹೆಣ ಕುಯ್ಯುವುದಕ್ಕೆ ಒಪ್ಪಿಸಿದ್ದರು. ಒಮ್ಮೆ ಊರಿನ ಹೆಣ್ಣುಮಗಳು ನೇತುಹಾಕಿಕೊಂಡಾಗ ಪೊಸ್ಟ್‌ಮಾರ್ಟಂ ನಡೆಯುತ್ತಿತ್ತು. ಕಥೆಯ ನಿರೂಪಕ ಸ್ಥಾನದಲ್ಲಿ ಇರುವ ನಾಯಕ ಕದ್ದುಮುಚ್ಚಿ ಪೋಸ್ಟ್‌ಮಾರ್ಟಂ ನೋಡಿಯೇ ಬಿಟ್ಟ. ಅದುವರೆಗೂ ಪ್ರಾಥಮಿಕ ಹಂತದಲ್ಲಿ ಹಲವು ಬಾರಿ ಫೇಲ್ ಆಗುತ್ತಿದ್ದ ಹುಡುಗ ಪಿಯುಸಿ ನಂತರ ಮೆಡಿಕಲ್ ಸೇರಬೇಕು ಎಂದು ಅಪ್ಪನನ್ನು ಒಪ್ಪಿಸಿದ. ಊರಿನ ಹುಡುಗರ ಜೊತೆ ಚಿನ್ನಿದಾಂಡು ಆಡಿಕೊಂಡು ಹುಡುಗರ ಜೊತೆ ತುಂತಾಟ ಕಿತ್ತಾಟಗಳನ್ನು ಮಾಡಿಕೊಂಡು ಮನೆಗೆ ದೂರುಗಳು ಬರುವಂತೆ ಮಾಡಿಕೊಂಡಿದ್ದ ಇಂತಹ ಪಡ್ಡೆ ಹುಡುಗ ಡಾಕ್ಟರ್ ಆಗಿ ಊರಿನ ಸರ್ಕಾರಿ ಆಸ್ಪತ್ರೆಯಲ್ಲಿ ಬಡ್ತಿ ಹೊಂದಿದ ಮೇಲೆ ತಾನು ನೋಡಿದ ರಂಗವ್ವನ ಪೋಸ್ಟ್‌ಮಾರ್ಟಂ ತನ್ನನ್ನು ಡಾಕ್ಟರ್ ಆಗಿಸುವಂತೆ ಮಾಡಿದ್ದನ್ನು ನೆನಪಿಸಿಕೊಂಡು ಅಂದು ಪೋಸ್ಟ್‌ಮಾರ್ಟ ಮಾಡುತ್ತಿದ್ದ ತಲೆಹಿಡುಕ ಎಂಕ್ಟಣ್ಣನ ಬಗ್ಗೆ ವಿಚಾರಣೆ ನಡೆಸಿದಾಗ ಅವನು ಸತ್ತುಹೋದ ವಿಷಯ ತಿಳಿಯಿತು. ಒಮ್ಮೆ ಪೋಸ್ಟ್‌ಮಾರ್ಟಂ ಸಮಯದಲ್ಲಿ ಹೆಣ ಕುಯ್ಯುವುದಕ್ಕೆ ಕರೆ ಕಳುಹಿಸಿದಾಗ ಹಾಲೇಶಿ ಎಂಬ ವ್ಯಕ್ತಿ ಈ ಕೆಲಸಕ್ಕೆ ಬಂದ. ಅವನು ಯಾರು ಎಂದು ಕುತೂಹಲದಿಂದ ಪ್ರಶ್ನಿಸಿದಾಗ ಅದು ಎಂಕ್ಟಣ್ಣನ ಮಗ ಕುಲ ಕಸುಬಾಗಿ ಹೆಣ ಕುಯ್ಯುವ ಕೆಲಸ ನಡೆಸಿಕೊಂಡು ಬರುತ್ತಿರುವುದನ್ನು ಊರಿನವರು ತಿಳಿಯಪಡಿಸಿದರು. ಹಾಲೇಶಿಯು ಕೂಡ ಹೆಣ ಕುಯ್ಯುವ ಕೆಲಸದಲ್ಲಿ ಬಹಳ ನಿಪುಣನಾಗಿದ್ದ. ತಂದೆಯ ನಿಪುಣತೆಯನ್ನು ಡಾಕ್ಟರ್ ಮಗನಲ್ಲೂ ಕಂಡು ಅವನಲ್ಲು ಕಂಡು ಚಕಿತನಾದ. ಹೀಗೆ ಈ ಕಥೆ ಭಾರತೀಯ ಸಮಾಜ ವ್ಯವಸ್ಥಿಕೆಯ ಜಾತಿ ಪದ್ಧತಿಯನ್ನು ಆಚರಿಸಿಕೊಂಡು ಬಂದ ಕಥೆಯನ್ನು ಪೋಸ್ಟ್‌ಮಾರ್ಟ ಮಾಡಿರುತ್ತಾರೆ. ಸತ್ತ ಮೇಲಿನ ಕಾಲಕ್ಕೆ ಅರ್ಥಗಳನ್ನು ಹುಡುಕುವ ಕೆಲಸ ಈ ಕಥೆ ಮಾಡುತ್ತಿದ್ದು, ಪೋಸ್ಟ್‌ಮಾರ್ಟಂ ಎಂಬ ಹೆಸರು ಬಹಳ ಸಮರ್ಥವಾಗಿ ಹೊಂದಿಕೊಂಡಿದೆ.

ಅಪರೂಪದ ವಸ್ತುವೊಂದನ್ನು ಹೊತ್ತ ಕಥೆ. ಹಲ್ಕಾ ಬದುಕಿನ ನಡುವೆ ವಸ್ತುವೊಂದನ್ನು ಹೊತ್ತ ಕಥೆ. ಹಲ್ಕಾ ಬದುಕಿನ ನಡುವೆ ಬದುಕು ಮನಸ್ಸಿನಲ್ಲಿ ಆಕಾಂಕ್ಷೆಯನ್ನು ಇಟ್ಟುಕೊಂಡು ಸಮಾಜದ ಎದುರಿಗೆ ಕಾಲಕಸವಾಗಿ ಬದುಕುವ ಹಿಜಿಡಾಗಳ ಮನ ಮಿಡಿಯುವ ಕಥೆ.

ಈ ಹಲ್ಕಾ ಜಗತ್ತಿನಲ್ಲಿ ತಲೆಹಿಡುಕರು, ವಿಕೃತ ಕಾಮಿಗಳು, ಶ್ರೀಮಂತರ ಚಿಕ್ಕ ಕಾಸಿಗೆ ಸರಗು ಹಾಸುವ ಸೂಳೆಯರು ಈ ರೀತಿಯ ಸಮಾಜವನ್ನು ನೆನಪು ಮಾಡಿಕೊಂಡರೆ ನಾಯಿ, ಹಂದಿಗಳ ಜೀವನವೇ ಎಷ್ಟೊಂದು ಉತ್ತಮ ಅನ್ನಿಸುತ್ತದೆ. ಅನೇಕರು ನನ್ನನ್ನು, ಹಿಜಡಾ, ಚಕ್ಕ, ನಪುಂಸಕ ಮುಂತಾದ ಬಿರುದುಗಳಿಂದ ಕರೆದಿದ್ದರು. ಹಾಗೆಯೇ ಕೆಲವು ಇವನನ್ನು ತಲೆಹಿಡುಕನನ್ನಾಗಿಯೂ ವಿಕೃತ ಕಾಮಿಗಳಿಗೆ ಶ್ರೀಮಂತ ನಡುಹೆಂಗಸರಿಗೆ ನೀತಿ ಚಿತ್ರಗಳನ್ನು ತಲುಪಿಸುವವನಾಗಿ ಪೋಲೀಸ್‌ರಿಗೆ ಹಪ್ತಾ ವಸೂಲಿ ಮಾಡುವವನಾಗಿ ನನ್ನನ್ನು ದುರುಪಯೋಗ ಪಡಿಸಿಕೊಂಡಿದ್ದಾರ. ಅಪ್ಪ, ಅಮ್ಮ, ಅಕ್ಕಂದಿರ ಪ್ರೀತಿಯ ತಮ್ಮನಾಗಿದ್ದೆ. ನನಗೆ 14 ವರ್ಷ ತುಂಬಿದ ಮೇಲೆ ದೇಹದಲ್ಲಿ ಅನೇಕ ಬದಲಾವಣೆಯಾಗುತ್ತಾ ಬಂದಿತ್ತು. ನನ್ನ ಧ್ವನಿಯಲ್ಲಿ ನನ್ನ ನಡೆ, ನುಡಿಗಳಲ್ಲಿ ಬದಲಾವಣೆಯು ಪ್ರಾರಂಭವಾಯಿತು. [11]"ನನ್ನ ಅಮ್ಮನಿಗೆ ನನ್ನ ಮೇಲೆ ಅತಿಯಾದ ಪ್ರೀತಿವಾತ್ಸಲ್ಯ ಮಮಕಾರ ಅವಳಲ್ಲಿತ್ತು. 'ಹೆತ್ತವರಿಗೆ ಹೆಗ್ಣಮುದ್ದು' ಎಂಬ ಮಾತು ನಿಜವಿರಬೇಕು. ಆದರೆ ನನ್ನ ಅಮ್ಮನಿಗೆ ನಾನು ಹೆಗ್ಗಣಕ್ಕಿಂತಲೂ ಕಡೆಯಾಗಿದ್ದರೂ ನನ್ನ ಮೇಲೆ ಅವಳ ಪ್ರೀತಿ ಜಾಸ್ತಿ ಇತ್ತು. ಅಪ್ಪ ಎಂಬ ಬೋಳಿಮಗ ಬಹಳ ವರ್ಷಗಳವರೆಗೆ ಚೆನ್ನಾಗಿಯೇ ನೋಡಿಕೊಳ್ತಾ ಇದ್ದ. ಯಾವಾಗ ಸುತ್ತಲಿನ ಹಳ್ಳಿಯ ಜನ ನನ್ನ ಅಪ್ಪನನ್ನು, ಥೂ... ಎಂಥ ಷಂಡನಂಥ ಮಗನನ್ನು ಹುಟ್ಟಿಸಿದ್ದೀಯಲ್ಲೋ...! ಎಂದು ಕೇಕೆ ಹಾಕಿ ನಗುತ್ತಿದ್ದರು.

ಅದಕ್ಕೆ ಅಪ್ಪ ದಿನ ಕುಡಿದು ಬಂದು ಒದೆಯುತ್ತಿದ್ದ, ಹೊಡೆಯುತ್ತಿದ್ದ, ಅಕ್ಕಂದಿರ ಜೊತೆ ಹೊಲಕ್ಕೆ ಹೋಗುವುದು ಅಕ್ಕಂದಿರ ಬಟ್ಟೆಯನ್ನು ಹಾಕಿಕೊಳ್ಳುವುದು ಎಲ್ಲರೂ ಇವನನ್ನು ಹೆಣ್ಣು ಎಂದು ಕರೆಯತೊಡಗಿದರು.

ಶಿವಯೋಗಿ ಊರು ಬಿಡಲು ಅವರ ಊರಿನ ಪೂಜಾರ ರೇವಣಪ್ಪನೇ ಮುಖ್ಯ ಕಾರಣ. ರೇವಣ್ಣಪ್ಪನ ಹೆಂಡತಿಯ ಹತ್ತಿರ ತುಂಬಾ ಸಲುಗೆಯಿಂದ ಇದ್ದುದರಿಂದ ರೇವಣ್ಣಪ್ಪ ಮಾದರ ಜಾತಿಯ ಹೆಂಗಸರು ಜೊತೆ ಸಂಬಂಧ ಇದೆ ಎಂದು ಹೇಳಿದ್ದಕ್ಕೆ ಅವನು ನನ್ನನ್ನು ರಕ್ತ ಬರುವಂತೆ ಹೊಡೆದು ಮನೆ ಹತ್ತಿರ ಬಂದು ಮನೆಯಿಂದ ಓಡಿಸಿದ ಅಪ್ಪನಿಗೆ ಇದರಿಂದ ಕೋಪನಾಗಿ ರಕ್ತ ಬರುವಾಗೆ ಒಡೆದು ಆ ದಿನ ನಮ್ಮಪ್ಪ [12]"ನೀನು ನಿಜವಾಗಿಯೂ ಗಂಡಸೇ ಆಗಿದ್ರೆ... ನನ್ನ ಬೀಜಕ್ಕೆ ಹುಟ್ಟಿದವನೇ ಆಗಿದ್ರೆ ನೀ... ಈ ಮನೆ ಬಿಟ್ಟುಹೋಗು, ಮತ್ತೆಂದಿಗೂ ನಿನ್ನ ಮುಖ ನಮಗೆ ತೋರಿಸಬೇಡ".

ನಾನು ಗಂಡಸು ಎಂದು ತೋರಿಸಬೇಕು ಎಂದು ಮನೆ ಬಿಟ್ಟುಬಂದೆ. ಎಲ್ಲರೂ ನನ್ನನ್ನು ಷಂಡ, ಹೆಣ್ಣಿಗ, ಹಿಜಡಾ ಎಂದು ಕರೆದರು, ಗಂಡಸು ಹೆಂಗಸಿನ ಕೆಲಸ ಮಾಡಿದರೆ ಅವರೆಲ್ಲಾ ಹೆಂಗಸರೇ? ಎಂಬ ಪ್ರಶ್ನೆ ಇವನಿಗೆ ಕಾಡಿತು. ಊರು ಬಿಟ್ಟು ಬಂದು ಹುಬ್ಬಳ್ಳಿಗೆ

ಸೇರಿದ ಹುಬ್ಬಳ್ಳಿಯಲ್ಲಿ ಟ್ರಾನ್ಸ್‌ಪೋರ್ಟ್ ಕಂಪನಿಯಲ್ಲಿ ಲಾರಿ ಕ್ಲೀನರ್ ಆದರು. ಇಲ್ಲಿಯ ಲಾರಿಯ ಡ್ರೈವರ್‌ಗಲು ಪಾಪ ತಿಂಗಳಗಟ್ಟಲೇ ಮನೆ ಬಿಟ್ಟು ಇರುತ್ತಿದ್ದ ನಮ್ಮ ಲಾಟ್ರೈವರ್ ನನ್ನ ಚೆನ್ನಾಗಿ ನೋಡಿಕೊಳ್ಳುತ್ತಿದ್ದರು. ಒಂದು ರಾತ್ರಿ ನಾನು ಮಲಗಿದಾಗ, ಆತ ಶಿವಯೋಗಿಯ ಮೇಲೆ ಮೃಗದಂತೆ ಎರಗಿ ಲೈಂಗಿಕವಾಗಿ ಬಳಸಿಕೊಂಡ. ಈ ಬಲಾತ್ಕಾರದಿಮದ ಇವರಿಗೆ ತಪ್ಪಿಸಿಕೊಳ್ಳಲು ಆಗದೇ ನೋವು ಅನುಭವಿಸಿದ್ದ ಹಳ್ಳಿಯಿಂದ ಹೊರಹಾಕಿದ ಜನಗಳೇ ಹಲ್ಕಾಗಳೆಂದು ತಿಳಿದಿದ್ದಾರೆ ಇವನಿಗೆ ಇಮದು ಹೊರ ಜಗತ್ತಿದೆ ಎಂಬುದು ಗೊತ್ತಾಯಿತು. ಶಿವಯೋಗಿ ಪಾಲಿಗೆ ಮದುವೆ ಅವಳ ಪಾಲಿಗೆ ಮೋಸ ಸಂಡ್ ಬಜಾರಿನಲ್ಲಿ ಮಾರುವ ಸೆಕೆಂಡ್ ಕ್ಲಾಸ್ ಬಟ್ಟೆಕೊಂಡು ಅವಳ ಮುಂದೆ ದೊಡ್ಡಗಂಡಸಿನಂತೆ ತಿರುಗಾಡುತ್ತಿದೆ. ಅವಳು ನನ್ನನ್ನು ಶ್ರೀಮಂತ ವ್ಯಕ್ತಿ ಎಂದುಕೊಂಡಳು. ಶಿವಯೋಗಿಯನ್ನು ಮದುವೆಯಾದಳು ಹಣ ಇರುವ ತನಕ ಇಬ್ಬರು ಚೆನ್ನಾಗಿದ್ದರು, ಹಣ ಮುಗಿದ ಮೇಲೆ ಕೆಟ್ಟದಾಗಿ ಮಾತನಾಡಿ ಹೊರಟಳು.

[13]"ನಿನ್ನ ಯೋಗ್ಯತೆ, ನಿನ್ನ ಷಂಡತನ ಮದುವೆಯ ಮುಂಚೆಯೇ ಗೊತ್ತಾಗಿದ್ದರೆ ನಾನು ನಿನ್ನ ಮುಖ ಕೂಡ ನೋಡುತ್ತಿರಲಿಲ್ಲ ಅಂತ ಹೇಳಿದಳು". ಶಿವಯೋಗಿಯು ಅವಳಿಗೆ ರಾತ್ರಿ ಸುಖಕೊಡದಿದ್ದರೆ, ಮಾತ್ರ ಗಂಡನ ನಾನು ಎಂಬ ಸ್ನೇಹಿತ ಹಿತೈಷಿಯಾಗಿರಬಾರದ ಎಂದು ತನ್ನ ಮನಸ್ಸಿನಲ್ಲಿ ಯೋಚನೆ ಮಾಡುತ್ತಾ ಪ್ರಶ್ನೆಯಾಕಿಕೊಳ್ಳುತ್ತಾನೆ.

ಹಿಜಡಾಗಳ ದೌರ್ಬಲ್ಯ ಅಸಹಾಯಕತೆಗಳನ್ನು ಜನರು ದುರುಪಯೋಗಪಡಿಸಿ ಕೊಳ್ಳುವ ಯಾತನಾಮಯ ಚಿತ್ರ. ಇಲ್ಲಿ ಶಿವಯೋಗಿ ಒಬ್ಬ ಗಂಡಸಾಗಿದ್ದು, ಮಾನಸಿಕವಾಗಿ ಆತನನ್ನು ಹಿಜಡಾವಾಗಿಸಿದ ಸಮಾಜದ ಕ್ರೂರತನ ಇಲ್ಲಿ ಚಿತ್ರಿಸಿದ್ದಾರೆ. ಹಾಗೆಯೇ ಇತ್ತೀಚೆಗೆ ಇವರಿಗೆ ನ್ಯಾಯ ದೊರೆಯಲು ಸಮಾಜದ ನಾನಾ ಸಂಘ-ಸಂಸ್ಥೆಗಳ ಹೋರಾಟಕ್ಕೆ ಇಳಿದಿವೆ. ಹಲವು ನಿರ್ದೇಶಕರು ಚಲನಚಿತ್ರಗಳ ಮೂಲಕ ಅವರ ಬದುಕಿನ ಛಾಯಾಚಿತ್ರಗಳನ್ನು ತೋರಿಸಿ ಎಲ್ಲರಿಗೂ ಅವರು ನಮ್ಮಂತೆ ಎಂಬ ಭಾವನೆಯನ್ನು ಮೂಡಿಸುವ ಪ್ರಯತ್ನ ಮಾಡಿದ್ದಾರೆ.

ಸಾಬರ ಹುಡುಗಿ ಕತೆಯಲ್ಲಿ ಹದಿಹರೆಯದ ಹೆಣ್ಣು ಗಂಡುಗಳಲ್ಲಿ ಕಾಡುವ ಕಾಮದ ಆಸೆ, ಬಯಕೆಗಳಿಗೆ ಮಿತಿ ಇಲ್ಲ. ಇಲ್ಲಿ ಕುಲ ಮತ ಬೇಧಗಳಲ್ಲ ಸಾರ್ವತ್ರಿಕವಾಗಿ ಇದು ಸತ್ಯ. ಇವು ಹೊರಹೊಮ್ಮಲು ನಿರಂತರ ಪ್ರಯತ್ನಿಸುತ್ತಿರುತ್ತವೆ. ಎಲ್ಲೋ ನಾಲ್ಕಾರು ಹದಿಹರೆಯದವರು ತಮ್ಮ ಅಂತರಂಗದಲ್ಲಿ ಕಾಡುವ ಭಾವನೆಗಳನ್ನು ಹೊರಹಾಕಿ ಸಮಾಜದಲ್ಲಿ ಕಷ್ಟಗಳಿಗೆ ಈಡಾಗಿ ದುರಂತದಲ್ಲಿ ಪರಿಸಮಾಪ್ತಿಗೊಳ್ಳುತ್ತದೆ.

ತಾಯಿ ಕರೀಮಾ ಬೇಗಂ ಮಗಳು ಫಾತಿಮಾಗೋಸ್ಕರ ಮಟನ್ ಬಿರಿಯಾನಿ ಅಡಿಗೆ ಮಾಡಿ ಅವಳನ್ನು ಕರೆದರೆ ಫಾತಿಮಾ ಅವಳ ಫ್ರೆಂಡ್ಸ್ ಜೊತೆ ಹರಟೆ ಹೊಡೆಯುತ್ತಾ ಇರುತ್ತಾಳೆ. ತನ್ನ ತಂದೆ ರಹೀಂ ಅಬ್ದುಲ್‌ಖಾನ್ ನಮಾಜ್‌ನಿಂದ ಬರುವಷ್ಟರಲ್ಲಿ ಮುಸ್ಲಿಂ ಕಟ್ಟುಪಾಡುಗಳನ್ನು ಪಾಲಿಸಿ ಅವರುಗಳು ಬೇಗಬೇಗನೆ ಮನೆಗೆ ಹೋಗುತ್ತಿದ್ದರು. ಫಾತಿಮಾನನ್ನು ಅಮ್ಮ ಕರೆದರೆ ಫಾತಿಮಾನಿಗೆ ಅಮ್ಮನ ಮಾತಿನ ಜೊತೆ ಲಕ್ಷ್ಯ ಇಲ್ಲ.

ಫಾತಿಮಾ ತನ್ನ ಸೌಂದರ್ಯವನ್ನು ಕನ್ನಡಿ ಮುಂದೆ ನೋಡಿಕೊಳ್ಳುವುದರಲ್ಲೇ ದಿನ ಕಳೆಯುತ್ತಿದ್ದಳು.

ಅಪ್ಪ ಫಾತಿಮಾನನ್ನು ತುಂಬ ಇಷ್ಟಪಡುತ್ತಿದ್ದ. ಅವಳು ಸರಿಯಾಗಿ ಊಟ ಮಾಡಲಿಲ್ಲ ಎಂದರೆ ಅಪ್ಪ ಅಮ್ಮ ಮಗಳನ್ನು ಬೈಯುತ್ತಿದ್ದರು. ಕಣ್ಣಿಗೆ ಕಾಜಲ್ ಹಾಕಿ ಹೊರಟರೆ ಹುಡುಗರ ಕಣ್ಣು ಇವಳ ಮೇಲೆಯೇ ಇರುತ್ತಿತ್ತು. ಇದರಿಂದ ಬಹಳ ಹಮ್ಮಿನಿಂದ ಇವಳು ಬೀಗುತ್ತಿದ್ದಳು.

[14]"ರಹೀಂ ಅಬ್ದುಲ್‌ಖಾನ್ ಕರೀಮಾ ಬೇಗಂ ಅಜಾದ್ ಕಾಲೋನಿಯಲ್ಲಿ ಸ್ವಂತ ಮನೆಮಾಡಿಕೊಂಡು ಸುಮಾರು 25 ವರ್ಷಗಳೇ ಆಗಿದ್ದವು. ರಹೀಂ ಅಬ್ದುಲ್‌ಖಾನ್ ಮಂಗಳೂರು ಸೀಮೆಯಿಂದ ಬಂದವ. ಆದರೆ ಈ ಬ್ಯಾರೀ ಅಲ್ಲ ಮುಸ್ಲಿಂ ಧರ್ಮ, ಕಟ್ಟಳೆ ರೀತಿ ನಮಾಜು ಇವುಗಳಲ್ಲಿ ಅತ್ಯಂತ ಪ್ರಬಳವಾದ ನಂಬಿಕೆ ಇಟ್ಟ ಕಟ್ಟಾ ಮುಸ್ಲಿಮನಾಗಿದ್ದ. ಈತನ ತಂದೆ ಮೊಹಮದ್ ರಫೀಕ್ ಖಾನ್ ದಿನನಿತ್ಯ ಕುರಾನ್ ಪಠಿಸುತ್ತಿದ್ದ. ದಿನಕ್ಕೆ ಐದು ಬಾರಿ ನಮಾಜು ಮಾಡುತ್ತಿದ್ದ. ಧರ್ಮದ ಕಟ್ಟಳೆಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡಿದ್ದ. ಮನೆಯ ಹೆಣ್ಣುಮಕ್ಕಳು ಹೊಸ್ತಿಲನ್ನು ದಾಟಿಬರಬಾರದು ಬುರ್ಕಾ ಇಲ್ಲದೇ ಹೊರಗಡೆ ಹೋಗಬಾರದು. ಈ ತರಹದ ಅನೇಕ ಕಟ್ಟಳೆಗಳನ್ನು ಮುಸ್ಲಿಮರಿಗೆ ಒತ್ತಿ ಹೇಳುತ್ತಿದ್ದ ಅದೇ ರೀತಿ ಉಳಿದ ಮುಸ್ಲಿಮರಿಗೂ ಒತ್ತಿ ಹೇಳುತ್ತಿದ್ದ ಅದೇ ರೀತಿ ಉಳಿದ ಮುಸ್ಲಿಮರಿಗೂ ಸಮುದಾಯದ ಹಿರಿಯನಾಗಿ ತಪ್ಪದೇ ಕುರಾನ್ ಪುಟಗಳ ಅರ್ಥವನ್ನು ಹೇಳುತ್ತಿದ್ದ. ಇಂತಹ ಪರಿಸ್ಥಿತಿಯಲ್ಲಿ ಬೆಳೆದುಬಂದಿದ್ದ ರಹೀಖಾನ್ ತಂದೆಯ ಮರಣಾನಂತರ ಅಪ್ಪ ಮಾಡುತ್ತಿದ್ದ ಎಲ್ಲ ಕಟ್ಟಳೆಗಳು, ನಮಾಜು, ದಾನ, ರಂಜಾನ್, ಉರುಸು ಧರ್ಮದಲ್ಲಿದ್ದ ಹೆಣ್ಣುಮಕ್ಕಳಿಗೆ ಹಾಗೂ ಕಾನೂನುಗಳು ಇವುಗಳನ್ನೆಲ್ಲವನ್ನೂ ಪಾಲಿಸಿಕೊಂಡು ಬಂದಿದ್ದ, ಇದಕ್ಕೆ ಜೊತೆಯಾಗಿ ಹೆಂಡತಿ ಕರೀನಾ ಬೇಗಂ ಕೂಡ ಸಹಧರ್ಮಿಣಿ ಸಹಕಾರಿಯಾಗಿದ್ದಳು. ಆದರೆ, ಫಾತಿಮಾಳಿಗೆ ಈ ಕಟ್ಟಳೆಗಳು ಉಸಿರುಕಟ್ಟಿಸುತ್ತಿತ್ತು. [15]"ಅಲ್ಲಾಹುವನ್ನು ನೀನು ನೋಡಿದ್ದೀಯಾ? ಆತ ಎಲ್ಲಿದ್ದಾನೆ? ಅಪ್ಪ ನೀನ್ಯಾಕೆ ಇಷ್ಟು ಉದ್ಧವಾಗಿ ಗಡ್ಡ ಬಿಟ್ಟಿದ್ದಿ? ನಿನ್ನ ತಲೆ ಮೇಲೆ ಯಾಕೆ ಈ ತರಹದ ಟೋಪಿ? ನಾವ್ಯಾಕೆ ಈ ತರಹದ ಬಟ್ಟೆ ಹಾಕಬೇಕು. ಬೇರಯವರು ಯಾಕೆ ಈ ತರಹ ಬಟ್ಟೆ ಹಾಕುತ್ತಾರೆ? ಚಿಕ್ಕಹುಡುಗಿಯಾಗಿ ರಹೀಂಸಾಬನಿಗೆ ಕೇಳುತ್ತಿದ್ದ ಪ್ರಶ್ನೆಗಳಿಗೆ ಆತ ಕೆಲವೊಮ್ಮೆ ಉತ್ತರಿಸುತ್ತಿದ್ದರೂ ಕೆಲವೊಂದಕ್ಕೆ ಅವಳ ಬೌದ್ಧಿಕ ಮಟ್ಟದಲ್ಲಿ ಉತ್ತರಿಸಲು ಆಗದು ಅಂತ ಸುಮ್ಮನಾಗಿ ಬಿಡುತ್ತಿದ್ದ".

ಮಸೀದಿಯ ಉಸ್ತುವಾರಿ ಹೊತ್ತಿದ್ದ ಅಪ್ಪ ಮುಸ್ಲಿಂ ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡಿಸಬೇಕು ಭಾಷಣ ಮಾಡುತ್ತಿದ್ದವ, ತನ್ನ ಮಗಳನ್ನು ಹೆಚ್ಚಿಗೆ ಓದಿಸಲು ಹಿಂಜರಿಯುತ್ತಿದ್ದ ಎಲ್ಲಿ ತನ್ನ ಮಗಳು ನಮ್ಮ ಧರ್ಮಕಟ್ಟಳೆಗಳನ್ನು ಓದಿನ ವೈಚಾರಿಕತೆಯಿಂದ ಪ್ರಶ್ನಿಸಿಯಾಳೆ ಎಂಬ ಭಯವಿತ್ತು ಆದರೂ ಆತಂಕದಿಂದಲೇ ಕಾಲೇಜಿಗೆ ಕಳುಹಿಸಿದ. ಸುಂದರಿ ಫಾತಿಮಾ ತಾನು ಹೊರಗಡೆ ಹೊರಟಾಗಲೆಲ್ಲಾ ತನ್ನ ಸುತ್ತ ಹರಿದಾಡುವ ಕಣ್ಣುಗಳನ್ನು ಗಮನಿಸಿದ್ದಳು. ತನಗೆ ಇಷ್ಟವಾಗಿದ್ದ ಬೇರೆ ಜಾತಿಯ ಹುಡುಗನಲ್ಲಿ ಆಕೆ ಪ್ರೀತಿ ಮೊಳೆಯಿತು. ಕಟ್ಟಾ ಮುಸ್ಲಿಂ ತಂದೆಯ ಮಗಳು ಫಾತಿಮಾ ಈಗ ಜಾತಿ ಮರ್ಯಾದೆ ಮೀರಿ ಬೇರೆ ಜಾತಿಯವನನ್ನು

ಮದುವೆಯಾದರೆ ಜನರು ಏನೆಂದಾರು ಎಂಬ ಭಯ ರಹೀಂನ ಧರ್ಮ ತನ್ನೆಲ್ಲಾ ಪ್ರಶ್ನೆಗಳಿಗೆ ಉತ್ತರಕೊಡುವುದೇ ಎಂದು ಯೋಚಿಸುತ್ತಲೇ ಕಂಗಾಲಾದನು.

## 2. ಭೌಗೋಳಿಕತೆ ಅನುಭವದ ವಿಸ್ತಾರ:

ಕೆಂಬಳ್ಳಿ, ಬೆಟಗೇರಿ, ರಾಣೆಬೆನ್ನೂರು, ಹೊಸಕೆರೆ, ಹಿರೇಬಯಲು, ಸಿದ್ಧಾಪುರ, ಶಿರಸಿ, ಶಿವಮೊಗ್ಗ ಸುತ್ತಲ ಪ್ರದೇಶ ಸಾಗರ ಕಾರ್ಕಳ, ಪೂನ, ಬೆಂಗಳೂರು, ಮುಂಬೈ, ದುಬೈ, ಆಸ್ಟ್ರೇಲಿಯಾ ಮುಂತಾದ ಸ್ಥಳಗಳ ಬದುಕುಗಳನ್ನು ಕಂಡು ಅನುಭವವನ್ನು ಓದುಗನಿಗೆ ಮುಟ್ಟಿಸುತ್ತಾರೆ. ದುಬೈನ ಬೆರಗಿನ ಲೋಕದಿಂದ ಹಿಡಿದು ಕೆಂಬಳ್ಳಿಯ ಸೀದಾಸಾದ ಮನಸ್ಸುಗಳನ್ನು ಚಿತ್ರಿಸುವ ಸೃಜನಶೀಲತೆ ಇವರಲ್ಲಿ ಇದೆ. ಈ ಎಲ್ಲಾ ಪ್ರದೇಶಿಗರ ಒಳತೋಟಿ ಮಿಡಿದು ನೋಡುವ ಸೃಜನಾತ್ಮಕತೆ ಎದ್ದು ಕಾಣುತ್ತದೆ. ಯಕ್ಷ ಪ್ರಶ್ನೆಯಂತಹ ಕಥೆಯಲ್ಲಿ ಬರುವ ಯಕ್ಷಗಾನ ಕಲೆಯನ್ನು ಬದುಕು ಮಾಗಿಸಿಕೊಂಡ ಅಲ್ಲಿಯ ಮಂಜಯ್ಯ ಹೆಗಡೆ ಅವರ ಸುತ್ತ ಹೆಣೆದುಕೊಳ್ಳುವ ಕತೆಗಳು ಅವರ ಆರಾಧನೆಗೆ ಮಹತ್ವ ಗುರುತಿಸುತ್ತವೆ.

ರಾಷ್ಟ್ರೀಯ ಹೆದ್ದಾರಿಯ ಕಥೆಗಳನ್ನು ಹೇಳುವಾಗ ಅವರು ಹೇಳುವ ವಿವರಗಳು ಅವರ ಹತ್ತಿರದಿಂದ ಕಂಡಂತೆ ಭಾಸವಾಗುತ್ತದೆ. ಹಿಜಡಾ, ಲಾರಿ ಡ್ರೈವರ್ ಮಲ್ಲಿಕಾ, ಸೌಧಾಮಿನಿ, ಇಂತಹ ಪಾತ್ರಗಳ ಬದುಕಿನ ಬೆಳವಣಿಗೆಯೊಂದಿಗೆ ಇವರ ಕತೆಗಳನ್ನು ಹೇಳುವಾಗ ಅವರು ಹೇಳುವ ವಿವರಗಳು ಅವರ ಹತ್ತಿರದಿಂದ ಕಂಡಂತೆ ಭಾಸವಾಗುತ್ತದೆ. ಹಿಜಡಾ, ಲಾರಿ ಡ್ರೈವರ್ ಮಲ್ಲಿಕಾ, ಸೌಧಾಮಿನಿ ಇಂತಹ ಪಾತ್ರಗಳ ಬದುಕಿನ ಬೆಳವಣಿಗೆಯೊಂದಿಗೆ ಇವರ ಕಥೆಗಳ ಬೆಳವಣಿಗೆಯಾಗಿದೆ. ಇನ್ನೂ ಸಂಬಂಧಗಳನ್ನು ಕುರಿತು ಮಾತನಾಡಿದಾಗಲಂತೂ ಹೃದಯ ಚೀರುವಂತಹ ವಿದ್ರಾವಕ ಚಿತ್ರಗಳನ್ನು ನೀಡಿದ್ದಾರೆ.

ಸತ್ತವನ ಆತ್ಮಕಥೆಯಲ್ಲಿ ಬರುವ ಸಿದ್ದಪ್ಪಾಜಿ ಅಂತಹ ಆತ್ಮಗಳ ಜೊತೆ ಕೆಲಸ ಮಾಡುವ ಏಜೆಂಟ್ ಬಹಳ ತಮಾಷೆಯಾಗಿ ಕಾಣುತ್ತಾನೆ. ತಿಥಿ ಮಾಡುವ ವಿಧಾನ ಎಡೆಶಾಸ್ತ್ರ ಇವು ಎಲ್ಲ ಹತ್ತಿರದ ಊರಿನ ಯಾವುದೇ ಆವರಣೆಯನ್ನು ಕಥೆಗಾರರು ಎನ್ನಿಸುತ್ತದೆ. ದುಬೈನಿಂದ ಹಿಡಿದು ಕೆಂಬಳ್ಳಿ ಮುಂತಾದ ಗ್ರಾಮೀಣ ಭಾಗಗಳ ಎಲ್ಲ ಸಂವೇದನೆಗಳನ್ನು ನೋಡುತ್ತ ಹೋದಾಗ ಅವರು ನೋಡಿ ಭೌಗೋಳಿಕದ ವಿಸ್ತರಣದ ಜೊತೆಗೆ ಸ್ಥಳೀಕರಣದ ವಿವರ ಸೂಕ್ಷ್ಮತೆಗಳನ್ನು ಗುರುತಿಸುವುದಕ್ಕೆ ಬಯಸುತ್ತೇನೆ. ಸ್ಥಳೀಕರಣ ಎಂದರೆ ನಾನು ಅರ್ಥೈಸಿಕೊಂಡಂತೆ ಅಲ್ಲಿಯ ಬದುಕುಗಳು, ಆಚರಣೆಗಳು ಊರಿನ ಹಬ್ಬ, ಹರಿದಿನಗಳು, ಪಾತ್ರಗಳ ಒಳತೋಟಿಗಳು ಪುಟ್ಟ ಪುಟ್ಟ ವಿವರಗಳನ್ನು ಕತೆಗಾರರು ಗುರುತಿಸಿದ ರೀತಿಯನ್ನು ಕುರಿತು ಭಾವಿಸಿದ್ದೇನೆ. ಉದಾ–ತಿಥಿ ಮಾಡುವ ಕ್ರಮ ಆ ಪ್ರದೇಶಿಗರಲ್ಲಿ ರೀತಿ ಭಿನ್ನ. ಯಕ್ಷಗಾನ ಕಲೆಯ ಎಲ್ಲಾ ಮಗ್ಗಲುಗಳ ಬಗ್ಗೆ ತಿಳಿಸುವ ರೀತಿ, ಹೋಟೆಲ್ ಉದ್ಯಮಕ್ಕ, ಹೋರಿ ಸ್ಪರ್ಧೆ ಸಂಬಂಧಿಸಿದಂತೆ ಹೀಗೆ ಪಟ್ಟಿ ಮಾಡುತ್ತಾ ಸಾಗಬಹುದು.

ಬನವಾಸಿ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಹೋರಿ ಸ್ಪರ್ಧೆ ಪ್ರತಿ ವರ್ಷ ನಡೆಯುತ್ತಿತ್ತು. ಹತ್ತು ಹಳ್ಳಿಗಳಿಂದ 60 ಕ್ಕೂ ಹೆಚ್ಚು ಹೋರಿಗಳು ಸ್ಪರ್ಧೆಗೆ ಇಳಿದರೆ ಅಷ್ಟೇ ಯುವಕರು ಅವುಗಳ ಮದವನ್ನು ಇಳಿಸಲು ಅಷ್ಟೇ ಸಂಖ್ಯೆಯಲ್ಲಿ 10 ಹಳ್ಳಿಯಿಂದಾ ಬಂದು ಸೇರುವುದು ಸಾಮಾನ್ಯವಾಗಿತ್ತು. ಮದವೇರಿದ ರಕ್ಕಸಗಳಂತಿರುವ ಹೋರಿಗಳನ್ನು ಹಿಡಿಯುವುದು, ಅಷ್ಟು ಸುಲಭದ ಕೆಲಸವೇನಲ್ಲ. ಅದರಲ್ಲೂ ಬಹದ್ದೂರ ಎಂಬ ಹೋರಿಯನ್ನು ಜಯಿಸುವುದು ತುಂಬ ಕಷ್ಟ. ಮಲ್ಕೇಶಿ ಹಾನ್‌ಗಲ್ ಜತೆ ದಾಸನಕೊಪ್ಪದ ಹೋರಿ ಬೆದರಿಸುವ ಸ್ಪರ್ಧೆಯಲ್ಲಿ ಮೂರುನಾಲ್ಕು ಹೋರಿಗಳನ್ನು ಹಿಡಿದು ಬೆಳ್ಳಿಯ ಕಡಗವನ್ನು ಬನವಾಸಿಯ ಬಹದ್ದೂರು ಗಂಡು ಹೋರಿಯ ಮೇಲೆ ಇವನ ಕಣ್ಣುಬಿತ್ತು. ಸ್ಪರ್ಧೆಯಲ್ಲಿ ಚೆನ್ನಾಗಿ ಫಲಗಿದ ಬಹದ್ದೂರು ಮೆಟ್ಟುವುದು ಅಷ್ಟೇನು ಸುಲಭದ ಕೆಲಸವಾಗಿರಲಿಲ್ಲ. ತನ್ನ ನಾಲ್ಕೈದು ಹುಡುಗರನ್ನು ಎಡಬದಿ ನಿಲ್ಲಲಿ ತಾನು ಬಲಬದಿಯಿರಿ. ಹೋರಿಯನ್ನು ಆಕ್ರಮಿಸಿ ಕುತ್ತಿಗೆಗೆ ಜೋತು ಬಿದ್ದು ಇನ್ನೇನು ಕೊರಳಿನ ಕೊಬ್ಬರಿ ಹಾರವನ್ನು ಪಡೆದೆಬಿಟ್ಟೆ ಎನ್ನುವಷ್ಟರಲ್ಲಿ ಕೊರಳನ್ನು ಬಲವಾಗಿ ಆತನ ಬಲ ಕುಗ್ಗುವಂತೆ ಮಾಡಲು ದೂರದವರೆಗೂ ಆತನನ್ನು ಓಡಿಸಿಕೊಂಡು ಹೋಗಿ ಒಮ್ಮೆ ಬಲಸೇರಿಸ ಮಲ್ಕೇಸಿಯನ್ನು ಎತ್ತಿಬೀಸಿ ಮಿಂಚಿನಂತೆ ಓಡಿಹೋಯಿತು. ಹೀಗೆ ಬಹದ್ದೂರಿಗೆ ಬೆಳ್ಳಿಕಡಗ ಮುಂತಾದ ಬಹುಮಾನಗಳು ಸಿಕ್ಕದವು. 1933ರ ಕಾರ್ತಿಕ ದೀಪಾವಳಿಯ ಹೋರಿ ಸ್ಪರ್ಧೆಯಲ್ಲಿ ಬಹದ್ದೂರನ್ನು ಗೆಲ್ಲಲೇ ಬೇಕು ಎಂಬುದನ್ನು ಹಠದಿಂದ ಅಥವಾ ಕನಸಿನಿಂದ ಸ್ನೇಹಿತರ ಎದುರಿಗೆ ಸವಾಲು ಹಾಕಿದ ಮಲ್ಕೇಸಿ ಒಳ್ಳೆಯ ಸಿದ್ಧತೆಯೊಂದಿಗೆ ಈ ಬಾರಿ ಸ್ಪರ್ಧೆ ಕಣಕ್ಕೆ ಇಳಿದಿದ್ದ. ಮಲ್ಕೇಶಿಯ ಕಡೆಯ ಐವರು ಹುಡುಗರು ಬಹದ್ದೂರ ಮೇಲೆ ಹಾಕಿ ಸೊಂಟ ಭುಜಕ್ಕೆ ಕೈಹಾಕಿದರು, ಮಲ್ಕೇಸಿ ಬಹದ್ದೂರ್ ಕುತ್ತಿಗೆಯನ್ನು ಉಸಿರು ಕಟ್ಟುವಂತೆ ಹಿಡಿದಿದ್ದ, ಮಲ್ಕೇಶಿಯ ಹತ್ತಿರದಿಂದ ಕಂಡ ಹೋರಿಯ ಕಣ್ಣುಗಳು ಕೆಂಪಗೆ ಉರಿಯುತ್ತಿದ್ದವು. ಬಹದ್ದೂರ್‌ನ್ನು ನೆಲಕ್ಕೆ ಬಗ್ಗಿಸಿಕೊಂಡು ಓಡಿಹೋಗಿದ್ದ ಮೂವರು ಅರ್ಧಗಂಟೆಯಾದರೂ ಪತ್ತೆಯಾಗಿರಲಿಲ್ಲ. ಬಹಳ ಸಮಯದವರೆಗೂ ಹುಡುಗರು ಕಾಣದೇ ಹೋದಾಗ ಜನರು ಕಂಗಾಲಾಗಿದ್ದರು. ಹುಡುಕಿ ಹೊರಟಾಗ ತಲೆಹಿಡಿದುಕೊಂಡು ಅಂಗಾತವಾಗಿ ಬಿದ್ದಿದ್ದಾಗ ಹೌಹಾರಿದರು. ಆತ ಬಿದ್ದಿದ್ದ ಸ್ವಲ್ಪ ದೂರದಲ್ಲೇ ಬಹದ್ದೂರ್ ಕೊರಳಿಗೆ ಕಟ್ಟಿದ್ದ 5 ಕೆಜಿ ಕೊಬ್ಬರಿ ಬಟ್ಟಲಿನ ಸರ ಬಿದ್ದಿತ್ತು. ಮಲ್ಕೇಶಿ ರಕ್ತಸ್ರಾವದಿಂದ ಮಣಿಪಾಲ್ ಆಸ್ಪತ್ರೆಗೆ ಸೇರಿದ. ಸ್ನೇಹಿತರು ಅವನು ಬದುಕಿದರೆ ಸಾಕು ಎಂದು ಪ್ರಾರ್ಥಿಸುತ್ತಿದ್ದರು. ಪೂರ್ಣ ಗುಣವಾದ ಮಲ್ಕೇಸಿ ಹುಚ್ಚನಾಗಿದ್ದ. ಇತ್ತ ಓಡಿಹೋದ ಹೋರಿ ಎಷ್ಟು ಹುಡುಕಿದರೂ ಸಿಗಲಿಲ್ಲ, ಅದರ ಮೇಲೆ 2 ಲಕ್ಷಕ್ಕೆ ಬೆಲೆಕಟ್ಟಿ ಕೊಳ್ಳಲು ಸಿದ್ಧರಿದ್ದು ಹುಡುಕಿ ಶೇಕ್‌ಸಾಬರು ಸುಸ್ತಾದರು.

ಈ ಕತೆಯು ಬನವಾಸಿ ಹಾಗೂ ಸುತ್ತಲ ಹಳ್ಳಿಗಳಲ್ಲಿ ನಡೆದು ಬಂದಿದ್ದು, ಯುವಬಲವನ್ನು ಪರೀಕ್ಷೆಗೆ ಹಚ್ಚುವ ಒಂದು ಆಚರಣೆಯಾಗಿ ನಮಗೆ ತಿಳಿದುಬರುತ್ತದೆ. ಹತ್ತು ಊರು ಮಂದಿಯನ್ನು ಈ ಹೋರಿ ಸ್ಪರ್ಧೆ ಒಟ್ಟುಗೂಡಿಸುತ್ತಿತ್ತು. ಇದು ಸ್ಪರ್ಧೆ ಎನ್ನುವುದಕ್ಕಿಂತ ಸಾಂಸ್ಕೃತಿಕ ನೆಲೆಯ ಆಚರಣೆಯಾಗಿ ಗುರುತಿಸಲ್ಪಟ್ಟಿರುವುದನ್ನು ಕಥೆಯಲ್ಲಿ ಕಾಣಬಹುದು.

ಯುವಕರ ಬಲಾಬಲ ಹಾಗೂ ಹಣಾಹಣಿ ಸ್ಪರ್ಧೆಯು ಹಿಂದಿನ ಹುರುಪು ಉತ್ಸಾಹಗಳನ್ನು ಬನವಾಸಿ ಕಡೆಯವರು, ಹೀಗೆ ಇಟ್ಟುಕೊಂಡಿದ್ದರು ಎಂಬುದನ್ನು ತಿಳಿಸುತ್ತದೆ. ಪ್ರಾಣ ಅಪಾಯಕ್ಕೆ ಒಡ್ಡಿಕೊಳ್ಳುವ ಯುವಕರ ಈ ಶ್ರದ್ಧೆ ನಿಜವಾಗಿಯೂ ಭಯಾನಕವಾದುದು ಎಂಬುದನ್ನು ಈ ಕಥೆ ಮನವರಿಕೆ ಮಾಡಿಕೊಡುತ್ತದೆ.

ಕಥಾನಾಯಕ ಮಲ್ಲೇಶಿಯ ಹಠದಿಂದ ಅರೆಹುಚ್ಚು ಸ್ಥಿತಿಗೆ ಬಂದ ದುರಂತ ಮನಮಿಡಿಯುತ್ತದೆ. ಜೊತೆಗೆ ಆ ಪ್ರದೇಶಿಗರಿಗೆ ಇರುವ ಸ್ಪರ್ಧೆಯ ಹುಚ್ಚುತನದ ಅರಿವಾಗುತ್ತದೆ.

ಬಯಲು ಸೀಮೆಯ ಬಿಸಿಯನ್ನು ಕಥೆಗಾರರು ಕಣ್ಣಿಗೆ ಕಟ್ಟುವಂತೆ ಹೇಳುತ್ತಾ ಸಾಗುತ್ತಾರೆ. ಈ ಪ್ರದೇಶದ ಘಟಿಂಗ ಎಂದೇ ಪ್ರಸಿದ್ಧರಾದ ಫಕೀರಪ್ಪ ಎತ್ತರದ ಆಳು, ಹುರಿಯಾದ ಮೀಸೆ ಆ ದೇಹದ ಆಕರ್ಷನೆ, ಮನೆ ಮತ್ತು ಊರಿನಲ್ಲಿ ವಕಾಲತ್ತಿಗೆ ಹೆಸರಾಗಿದ್ದ ಹಲವಾರು ರೀತಿಯ ವ್ಯವಹಾರಗಳನ್ನು ಮಾಡುತ್ತ ದರ್ಪದಿಂದ ಬಾಳುತ್ತಿದ್ದ ಈತನಿಗೆ ಹೆಣ್ಣುಕೊಡಲು ಯಾರು ಮುಂದಾಗಲಿಲ್ಲ. ಇವನಿಗೆ ನಿಶ್ಚಯವಾಗಿದ್ದ ಮಾಧವಿ ಲಂಬಾಣಿ ಹುಡುಗನ ಜೊತೆ ಓಡಿಹೋದಿದ್ದಳು. ಓಡಿ ಹೋದ ಕಾರಣಕ್ಕೆ ಚರ್ಮ ಸುಲಿಯುವಂತೆ ಅವರಿಬ್ಬರಿಗೂ ಹೊಡೆದಿದ್ದ ಜಮೀನ್ದಾರನಾಗಿದ್ದು, ಮಂಡಕ್ಕಿ ಮಿರ್ಚಿ ಅಂಗಡಿಯನ್ನು ತೆರೆಯುವ ಮೂಲಕ ಊರಿಗೆ ಮೊದಲು ಹೋಟೆಲ್ ಪರಿಚಯಿಸಿದ್ದ, ಕರಿಯಪ್ಪನ ಮನೆ ಮುಂಭಾಗದಲ್ಲಿ ಪ್ರಾರಂಭವಾದ ಹೋಟೆಲ್ ಮುಂದೆ ಫಕೀರಪ್ಪ ವಿಧವೆ ಕರಿಯವ್ವನ ಮನೆಯಲ್ಲಿ ಉಳಿಯತೊಡಗಿದ್ದ. ಆ ಕರಿಯವ್ವಳಿಗೆ ಮೀಸೆ ಫಕೀರಪ್ಪನ ದೇಹಸಿರಿ ನೋಡಿ ಅವನ ಜೊತೆ ಸ್ನೇಹ ಮಾಡುತ್ತಾಳೆ. ಮೀಸೆ ಫಕೀರಪ್ಪ ಅದನ್ನು ದುರುಪ್ರಯೋಗ ಪಡಿಸಿಕೊಳ್ಳುತ್ತಾನೆ. ಉಂಡಾಡಿ ಫಕೀರಪ್ಪ ಕರಿಯವ್ವನ ಮನೆಯ ಮುಂಭಾಗದಲ್ಲಿ ಅಂಗಡಿ ತೆರೆದವನು ಮುಂದೆ ಅವಳ ಮನೆಯಲ್ಲಿಯೇ ಇರತೊಡಗಿದಾನ, ಊರವರ ಚುಚ್ಚುವ ಮಾತುಗಳಿಗೆ ನೊಂದ ಕರಿಯವ್ವ, ಕೆಲವಾರು ದಿನ ಆದ ನಂತರ ಊರಿನವರು ಕರಿಯವ್ವನ ಬಗ್ಗೆ ಕೆಟ್ಟದ್ದಾಗಿ ಮಾತನಾಡಿಕೊಂಡಾಗ ಅವಳು ಆಸ್ತಿಪಾಸ್ತಿ ಊರು ಬಿಟ್ಟು ಹೊರಟುಹೋದಳು. ಸಿಕ್ಕ ಕರಿಯವ್ವನ ಆಸ್ತಿ ತನ್ನದೇ ಎಂಬಂತೆ ಬಾಳತೊಡಗಿದ ಫಕೀರಪ್ಪ. ಚಿನ್ನಮುಳುಗುಂದಕ್ಕೆ ತಾಯಿ ನೀಲವ್ವನನ್ನು ಕರೆಸಿಕೊಂಡಿದ್ದ. ತಾಯಿಯ ಒತ್ತಾಯದಂತೆ ಸೈಕಲ್ ಏರಿ ಊರು ಊರು ತಿರುಗಿ ಹೆಣ್ಣಿಗಾಗಿ ಹುಡುಕಾಡಿದ. ಗಂಗವ್ವನ ಜೊತೆ ಮದುವೆಯಾಯಿತು. 3-4 ವರ್ಷವಾದರೂ ಮಕ್ಕಳಾಗದ ಕಾರಣ ಯಲ್ಲವ್ವ 2ನೇ ಹೆಂಡತಿಯಾಗಿ ಮನೆ ತುಂಬಿದಳು. ಗಂಡನಿಗೆ ಸಾರಾಯಿ ಸರಬರಾಜು ಮಾಡುತ್ತಾ ಕೊನೆಗೆ ತಾನು ಕೂಡ ಕುಡಿತದ ಚಟಕ್ಕೆ ಬಿದ್ದಳು. ಕೊನೆಗೆ ಒಂದು ದಿನ ಫಕೀರಪ್ಪ ಮಕ್ಕಳ ಜೊತೆ ಗಲಾಟೆ ಮಾಡಿಕೊಂಡು ವಿಷಕುಡಿದು ಆತ್ಮಹತ್ಯೆ ಮಾಡಿಕೊಂಡಿದ್ದ. ಇದ್ದ ನಾಲ್ಕು ಮಕ್ಕಳು ಅಪ್ಪನ ಕೆಟ್ಟ ಚಟಗಳನ್ನು ತುಂಬಿಕೊಂಡಿದ್ದು, ಅವನಿಂದ ದೂರವಾಗಿದ್ದರು. ಅವನು ಸತ್ತಾಗ ಅವನ ಕೈಹಿಡಿಯದ ಹೆಂಡತಿ ಮತಿಭ್ರಮಣೆಯಾಗಿದ್ದು, ಅವನಿಗೆ ಕೊಳ್ಳಿಯಿಡಲು ಮಕ್ಕಳು ಯಾರು ಇರಲಿಲ್ಲ. ಅಮ್ಮನ ಜೊತೆ ಊರಿಗೆ ಹೋಗಿದ್ದ, ಫಕೀರಪ್ಪನ ಮೊಮ್ಮಕ್ಕಳಾದ ನಿರೂಪಕರೇ ಸಂಸ್ಕಾರದ ಕರ್ತವ್ಯ ಮುಗಿಸಿದ್ದರು.

ಫಕೀರಪ್ಪ ಸತ್ತಾಗ ಊರಿನ ಜನ ಕರಿಯವ್ವನಂತಹ ಹೆಣ್ಣುಮಕ್ಕಳ ಬಗ್ಗೆ ಮಾತನಾಡಿಕೊಳ್ಳುತ್ತಾ ಅವಳ ಆಸ್ತಿ ಕಬಳಿಸಿದ್ದರಿಂದ ಫಕೀರಪ್ಪನಿಗೆ ಇಂತಹ ದುಃಸ್ಥಿತಿ ಬಂದಿದೆ ಎಂದು ಜನ ಮಾತನಾಡಿಕೊಂಡರು. ಫಕೀರಪ್ಪನ ದರ್ಪ ಧಿಮಾಕುಗಳನ್ನು ತೋರಿಸುವ ಮೀಸೆಯ ಜೊತೆಗೆ ಊರಿನ ಜತೆಗೆ ಅವನಿಗಿದ್ದ ಸಂಬಂಧ ಜೊತೆಗೆ ಅವ್ಯವಹಾರ, ಚುರುಕುತನ ಕರಿಯವ್ವನ ಬದುಕನ್ನು ಹಾಳು ಮಾಡಿದ ಪುರಷ ಸ್ವಾಮ್ಯತೆಯ ಕಾರಣದಿಂದ ಈ ಪಾತ್ರ ವಿಲನ್‌ನ ಪಾತ್ರವಾಗಿ ಚಿತ್ರಿತವಾಗಿದೆ. ಅವನು ಅಂದುಕೊಂಡಂತೆ ಸಿಕ್ಕಬೇಕು ಎಂದು ವಕಾಲತ್ತಿನಲ್ಲಿ ತನ್ನ ದುರಂತವನ್ನು ತಾನೇ ತಂದುಕೊಳ್ಳುವಂತಹ ದುರವಸ್ಥೆಯ ಬಗ್ಗೆ ಕಥೆ ಹೇಳುತ್ತಾ ಸಾಗುತ್ತದೆ.

ಸತ್ತವನ ಆತ್ಮಕಥೆಗೆ ನಂಬಿಕೆಯೇ ಜೀವ ಜನರ ನಂಬಿಕೆಯನ್ನು ಬಂಡವಾಳವಾಗಿಸಿಕೊಂಡು ಪೂಜಾರಿ ಸಿದ್ದಪ್ಪಾಜೀ ಸತ್ತವನ ಹೆಣವನ್ನು ಇಟ್ಟುಕೊಂಡು ಜನರ ನಂಬಿಕೆಯ ಮೇಲೆ ಆಡವಾಡಿಕೊಂಡು ಮೂಢನಂಬಿಕೆಯನ್ನು ಎತ್ತಿ ತೋರಿಸುತ್ತದೆ. ಜನರ ಮೇಲೆ ಭಯ ಹುಟ್ಟಿಸಿ ಪೂಜಾರಿ ಸಿದ್ದಪ್ಪಾಜೀ ತನ್ನ ಆಸೆ-ಆಕಾಂಕ್ಷೆಗಳನ್ನು ತೀರಿಸಿಕೊಳ್ಳುತ್ತಾನೆ. ಜೊತೆಗೆ ಸತ್ತವನ ಮಗ ಅಂದರೆ ರಾಟೆ ತಿಮ್ಮಪ್ಪನ ಮಗ ವಿದ್ಯಾವಂತ ಜೊತೆಗೆ ಲಂಡನ್‌ನಲ್ಲಿ ಐದಾರು ವರ್ಷಗಳಿಂದ ಅಲ್ಲಿ ಇದ್ದು, ಒಂದು ದೊಡ್ಡ ಕಂಪನಿಯನ್ನು ಮಾಡಿರುತ್ತಾನೆ.

ಅದರ ಜೊತೆಗೆ ತಂದೆ ಸತ್ತ ಹೆಣವಾಗಿ ಮಲಗಿದ್ದ ಅಪ್ಪನಿಗಿಂತ ತನ್ನ ದುಡಿಮೆ ತನ್ನ ಕೆಲಸ ಕಾರ್ಯಗಳು ಮುಖ್ಯವಾದವು ಎಂದು ಜನರೆಂದುಕೊಳ್ಳುತ್ತಾರೆ ಎಂದು ಎಷ್ಟು ಬೇಗ ಕಾರ್ಯಗಳು ಮುಗಿಯುತ್ತವೆ ಎಂಬ ಆತುರದ ಜೊತೆಗೆ ಹುಟ್ಟಿಸಿದ ತಂದೆಗೋಸ್ಕರ ಒಂದು ಸ್ವಲ್ಪ ಮನಸ್ಸಿನ ಪೂರಕವಾಗಿ ಕಾರ್ಯ ಮುಗಿಸುವ ವ್ಯವಧಾನವೂ ಇರಲಿಲ್ಲ. ತಂದೆ ಸತ್ತರು ಈ ಸಮಯದಲ್ಲಿ ಸಾಯಬೇಕಿತ್ತ ಎನ್ನುವ ಮಗ. ಮೂಢನಂಬಿಕೆಯ ಆಗರವಾಗಿದ್ದು, ಸಿದ್ಧರ ಸಾಂಪ್ರದಾಯಿಕ ನೆಲೆಗಳಲ್ಲಿ ಸಿಲುಕಿ ನಲುಗಿದ ವಿಚಾರವಂತಿಕೆಯ ಪ್ರತೀಕವಾಗಿ ಈ ಕಥೆ ಬಹುಮುಖ್ಯ ಎನ್ನಿಸುತ್ತದೆ.

ಸತ್ತವನ ಆತ್ಮಕತೆಯಲ್ಲಿ ಅವರು ಮಾಡುವ ಸಂಸ್ಕಾರ ರೀತಿಯು ವಿಭಿನ್ನವಾಗಿದೆ. ಸತ್ತವನ ಬಗ್ಗೆ ಯಾರು ಕೆಟ್ಟದಾಗಿ ಮಾತನಾಡಬಾರದು. ಹಾಗೆ ಏನಾದರೂ ಮಾತನಾಡಿದರೆ, ಆತ್ಮ ಬೇಗ ಕೈಲಾಸವನ್ನು ಸೇರುವುದಿಲ್ಲವಂತೆ, ಕಾಶಿ, ಶ್ರೀಶೈಲ, ಕೇದಾರ ಅಂತ ಸುತ್ತಾಡುತ್ತಾ ಬಂಗಾಡಿ ಸಿದ್ಧಪ್ಪಾಜಿಯನ್ನು ಕರೆದರು. ಸತ್ತವನ ಸಂಸ್ಕಾರ ಮಾಡುವುದಾಗಿ ಹೇಳಿ ಸಿದ್ದಪ್ಪಾಜಿ ಆ ಸಂಸ್ಕಾರ ಮಾಡುವ ರೀತಿಯ ಬೇರೆ, ಅಲ್ಲಿಯ ಜನರು ಮೂಢನಂಬಿಕೆಯನ್ನು ತಮ್ಮ ಜೀವನದಲ್ಲಿ ತುಂಬಾ ಅಳವಡಿಸಿಕೊಂಡಿದ್ದಾರೆ.

ಸತ್ತವನ ಮನೆಯಲ್ಲಿ ಪೂಜೆ ಎಡೆಶಾಸ್ತ್ರಗಳ ಶಿವಗಣಾರಾಧನೆಯ ರೀತಿಯಲ್ಲಿ ಕಾರ್ಯ ಪೂಜೆಗಳು ನಡೆಯುತ್ತಿದ್ದವು. ಅಪ್ಪ ತೀರಿಕೊಂಡ ಎಂದು ಹೇಳಿ ಲಂಡನ್‌ನಲ್ಲಿ ಇದ್ದ ಮಗನನ್ನು ಕರೆಸಿ ಅವನಿಂದ ಈ ಕಾರ್ಯ ಮಾಡಿಸಬೇಕು ಎಂದು ಹೇಳುವ ಸಿದ್ದಪ್ಪಾಜಿ ಮಗನಿಗೆ ತನ್ನ ವ್ಯವಹಾರದ ಮೇಲೆಯೇ ಚಿಂತೆ, ಇಷ್ಟು ವರ್ಷ ಸಾಕಿದ ಅಪ್ಪನಿಗಿಂತ ತನ್ನ

ವ್ಯವಹಾರವೇ ಹೆಚ್ಚು ಎಂದುಕೊಳ್ಳುವ ಮಗ ಸತ್ತವನು ತನ್ನ ಮಗನಿಗೆ ಒಳ್ಳೆಯ ಹಣ ಮಾಡುವುದು ಹೇಳಿಕೊಟ್ಟನೇ ಹೊರತು ಸಂಬಂಧಗಳಿಗೆ ಹೇಗೆ ಬೆಲೆಕೊಡುವುದೆಂದು ಹೇಳಿಕೊಟ್ಟಿಲ್ಲ. ಹದಿಮೂರು ದಿನಗಳ ಸೂತಕ ಕಳೆಯುವವರೆಗೂ ಊರು ಬಿಡುವ ಹಾಗಿಲ್ಲ. ಪುಣ್ಯತಿಥಿಗೆ ಬದುಕಿದ್ದಾಗ ತಿನ್ನುತ್ತಿದ್ದ ಇಷ್ಟವಾದ ತಿಂಡಿಗಳನ್ನು ತಿಥಿಯ ಕೊನೆಯ ದಿನಕ್ಕೆ ಇಡುತ್ತಿದ್ದರು.

16"ಸತ್ತವನ ಜೀವಂತವಿದ್ದಾಗ ತುಂಬಾ ಕಷ್ಟಪಟ್ಟು ತಿನ್ನುತ್ತಿದ್ದ ಎಲ್ಲವೂ ತಿಥಿ ಎಡೆಯ ಎಲೆಯ ಮೇಲೆ ಇರಲೇಬೇಕು ಇಲ್ಲದಿದ್ದರೆ ಸತ್ತವನ ಆತ್ಮ ಅಷ್ಟು ಬೇಗ ಸಂತೃಸಿ ಹೋಗುವುದಿಲ್ಲ" ಅಂತ ಹೇಳಿದರು. ಸತ್ತವನು ಇದ್ದಾಗಲಂತೂ ತನ್ನ ತಿನ್ನುವ ಚಪಲವನ್ನು ತೀರಿಸಿಕೊಂಡಿರಲಿಲ್ಲ. ಸತ್ತ ಮೇಲಾದರೂ ಎಡೆಶಾಸ್ತ್ರಕ್ಕಾದರೂ ಇಟ್ಟು ಇನ್ನು ಕೈಲಾಸ ಸೇರದೇ ಊರಲ್ಲೇ ಇರುವ ಆತನ ಆತ್ಮಕ್ಕೆ ಶಾಂತಿ ನೀಡಿರಪ್ಪ" ಅಂತ ತಿಥಿಯ ಕಾರ್ಯವನ್ನು ಮಾಡಿ ಎಂದು ಹೇಳುತ್ತಿದ್ದ. ಇಷ್ಟಾದರೂ ಕಾಕಾ ಎಚಿದು ಕೂಗಿದರೂ ಒಂದು ಕಾಗೆಯು ಬರಲಿಲ್ಲ ಎಂದರೆ ಆ ತಿಥಿಯಲ್ಲಿ ಏನೋ ಅಪಚಾರವಾಗಿದೆ ಎಂದು ಹೇಳುತ್ತಿದ್ದಾರೆ. ಯಾರಾದರೂ ಬಯ್ದಿದರೆ ಕ್ಷಮೆ ಕೇಳಿರೆಂದು ಸೂಚನೆ ನೀಡುತ್ತಿದ್ದರು. ಕ್ಷಮೆ ಕೇಳಿದ ನಂತರವೇ ಮುಂದಿನ ಕಾರ್ಯ ಮಗನ ಹತ್ತಿರ "ಅಪ್ಪಯ್ಯ ಗೊತ್ತಿದ್ದು ಗೊತ್ತಿಲ್ಲದೇನೋ ಏನೋ ನಮ್ಮಿಂದ ತಪ್ಪಾದ್ರೆ ಕ್ಷಮಿಸಪ್ಪ ಎಂದು ಹೇಳಿದ ತಕ್ಷಣ ಕಾಗೆಗಳು ಸುಲಭವಾಗಿ ಕಾಕಾ ಎಂದು ಬರುತ್ತವೆ.

ಇಂತಹ ಆಚರಣೆಗಳ ವಿವರಗಳು ಕತೆಗಾರರ ಸ್ಥಳೀಕರಣದ ಬಗ್ಗೆ ಮಾಹಿತಿಯನ್ನು ತಿಳಿಸುತ್ತವೆ.

ಸಿದ್ದಪ್ಪಾಜಿ ಸತ್ತವನ ಭಾವಚಿತ್ರದ ಮುಂದೆ ನಿಂತು ಊಟ ಮಾಡುವುದಕ್ಕೆ ಮೊದಲು ನಾವು ಲೋಬಾನ ಹಾಕೋದು ನಮ್ಮಂತಹವರ ಸಿದ್ಧರ ಸಂಪ್ರದಾಯ ಎಂದು ಹೇಳುತ್ತಾನೆ. ರಾತ್ರಿ ಆದ ತಕ್ಷಣ ಮಾರಮ್ಮನ ಗುಡಿಯಲ್ಲಿ ಕುಳಿತು ಜನರು ತಂದ ಊಟತಿಂಡಿ ತಿಂದು ಸಿದ್ದಪ್ಪಾಜಿ ತನ್ನ ಆಸೆಯನ್ನು ತೀರಿಸಿಕೊಳ್ಳುತ್ತಾನೆ. ಹೆಂಡ ಕುಡಿದು ತಿಂದ ಬಾಳೆಎಲೆಯನ್ನು ಮಾರಿಗುಡಿಯ ಹಿಂದೆ ಹಾಕುತ್ತಾನೆ. ಮರುದಿನ ಬೆಳಗ್ಗೆ ಪಂಚೆ, ಟವಲ್, ಪೂಜೆಗೆ ಹೊಸದಾಗಿ ತಂದಿದ್ದ ತಾಮ್ರದ ಕೊಡ ಎಲ್ಲವನ್ನು ತೆಗೆದು ತನ್ನ ಜೋಳಿಗೆಗೆ ಹಾಕಿಕೊಂಡು ಸಿದ್ಧಪ್ಪಾಜಿ ಊರ ಹೊರಗಿನ ದಾರಿ ಹಿಡಿದುಬಿಟ್ಟ. ನಸುಕಿನಲ್ಲಿ ಸಿಕ್ಕ ಕೆಲವರಿಗೆ ಉಕ್ಕಡಗಾತ್ರಿ ಕರಿಬಸವಜ್ಜನ ಜಾತ್ರೆಗೆ ಹೋಗ್ತಾ ಇದ್ದೀನಿ ಅಂತ ಹೇಳಿದ.

ಊರಿನ ಜನರಲ್ಲಿ ಸತ್ತವನ ಆತ್ಮ ಊರು ಬಿಟ್ಟಿದೆ ಎಂದು ಖುಷಿಯಾದ್ರೆ, ತಾನು ಒಂದು ತಿಂಗಳ ನಂತರ ಉಕ್ಕಡಗಾತ್ರಿಗೆ ಹೋಗುತ್ತೇನೆಂದು ಸಿದ್ಧಪ್ಪಾಜಿ ಹೇಳಿದ್ದವನು ಕೆಲವೇ ದಿನದಲ್ಲಿ ಹೊನ್ನಳ್ಳಿಯಲ್ಲಿ ರಕ್ತಕಾರಿ ಸತ್ತ. ಸುದ್ದಿ ತಿಳಿದ ಊರಿನವರು ಅವನ ಶಿವಗಣಾರಾಧನೆಯನ್ನು ಮಾಡಲು ನಿರ್ಧರಿಸಿದರು. ಆ ನಂತರದಲ್ಲಿ ಊರಿನವರೆಲ್ಲರೂ ಊರಿನಲ್ಲಿ ಯಾರೇ ಸತ್ತರು ಒಟ್ಟಾಗಿ ಸೇರಿ ತಿಥಿ ಮಾಡಲು ಮುಂದಾಗುವಂತಹ ಮೂಢ ಆಚರಣೆಯನ್ನು ಬೆಳೆಸಿಕೊಂಡು ಬಂದರು.

ನಾಗರಿಕ ಸಮಾಜದಲ್ಲಿ ಸಂಪಾದನೆಯಲ್ಲಿ ತೊಡಗಿದ ಮಗನಿಗೆ ತಂದೆ ಸತ್ತರು ಸಂಸ್ಕಾರಕ್ಕೆ ನಿಲ್ಲಲು ಸಮಯವಿಲ್ಲ. ಆದರೆ, ಇಡೀ ಊರಿಗೆ ಊರೇ ಇಂತಹ ಆಚರಣೆಯಲ್ಲಿ ತೊಡಗಿ ವಾರಾನುಗಟ್ಟಲೆ ಸಮಯ ಹಾಳುಮಾಡುವ ಗ್ರಾಮೀಣ ಪರಿಸರದ ಮೂಢ ಆಚರಣೆಗಳ ಬಗ್ಗೆ ಕಥೆ ಪ್ರಸ್ತಾಪಿಸುತ್ತದೆ.

**ಅಡಿ ಟಿಪ್ಪಣಿಗಳು:**

1. ಅಪ್ಪನ ಟೆಲಿಗ್ರಾಮ್ (ದೇವರ ಜೋಳಿಗೆ) – ಪುಟಸಂಖ್ಯೆ: 18
2. ಅನಾಥ ಮನಸ್ಸುಗಳು (ದೇವರ ಜೋಳಿಗೆ) – ಪುಟಸಂಖ್ಯೆ: 39
3. ಅನಾಥ ಮನಸ್ಸುಗಳು (ದೇವರ ಜೋಳಿಗೆ) – ಪುಟಸಂಖ್ಯೆ: 51
4. ಅನುಸೂಯಮ್ಮನ ಗರಡಿ ಮನೆ (ದೇವರ ಜೋಳಿಗೆ) – ಪುಟಸಂಖ್ಯೆ: 102
5. ಅನುಸೂಯಮ್ಮನ ಗರಡಿ ಮನೆ (ದೇವರ ಜೋಳಿಗೆ) – ಪುಟಸಂಖ್ಯೆ: 104
6. ಅನುಸೂಯಮ್ಮನ ಗರಡಿ ಮನೆ (ದೇವರ ಜೋಳಿಗೆ) – ಪುಟಸಂಖ್ಯೆ: 109
7. ಅನುಸೂಯಮ್ಮನ ಗರಡಿ ಮನೆ (ದೇವರ ಜೋಳಿಗೆ) – ಪುಟಸಂಖ್ಯೆ: 109
8. ಅನುಸೂಯಮ್ಮನ ಗರಡಿ ಮನೆ (ದೇವರ ಜೋಳಿಗೆ) – ಪುಟಸಂಖ್ಯೆ: 111
9. ಅಪ್ಪ ಎಂಬ ಪ್ರಾರಬ್ಧವೋ; ಅಮ್ಮನ ಉಪಲಬ್ಧವೋ (ದೇವರ ಜೋಳಿಗೆ) – ಪುಟ ಸಂಖ್ಯೆ: 70
10. ಅಪ್ಪ ಎಂಬ ಪ್ರಾರಬ್ಧವೋ; ಅಮ್ಮನ ಉಪಲಬ್ಧವೋ (ದೇವರ ಜೋಳಿಗೆ) – ಪುಟ ಸಂಖ್ಯೆ: 75
11. ಅಪ್ಪ ಎಂಬ ಪ್ರಾರಬ್ಧವೋ; ಅಮ್ಮನ ಉಪಲಬ್ಧವೋ (ದೇವರ ಜೋಳಿಗೆ) – ಪುಟ ಸಂಖ್ಯೆ: 82
12. ಹಲ್ಕಾ ಬದುಕಿನ ನಡುವೆ (ಅಮ್ಮನ ಆಟೋಗ್ರಾಫ್) – ಪುಟ ಸಂಖ್ಯೆ: 24
13. ಹಲ್ಕಾ ಬದುಕಿನ ನಡುವೆ (ಅಮ್ಮನ ಆಟೋಗ್ರಾಫ್) – ಪುಟ ಸಂಖ್ಯೆ: 28
14. ಹಲ್ಕಾ ಬದುಕಿನ ನಡುವೆ (ಅಮ್ಮನ ಆಟೋಗ್ರಾಫ್) – ಪುಟ ಸಂಖ್ಯೆ: 31
15. ಸಾಬರ ಹುಡುಗಿ (ಅಮ್ಮನ ಆಟೋಗ್ರಾಫ್) – ಪುಟ ಸಂಖ್ಯೆ: 53
16. ಸಾಬರ ಹುಡುಗಿ (ಅಮ್ಮನ ಆಟೋಗ್ರಾಫ್) – ಪುಟ ಸಂಖ್ಯೆ: 55
17. ಸತ್ತವನ ಆತ್ಮ (ದೇವರ ಜೋಳಿಗೆ) – ಪುಟ ಸಂಖ್ಯೆ: 137

# ಅಧ್ಯಾಯ : ೬

## ಫಕೀರ ಅವರ ಕಥೆಗಳ ಬೆಳವಣಿಗೆಯ ವಿಶೇಷತೆಗಳು:

ಫಕೀರರು ಕನ್ನಡ ಕಥಾಲೋಕದ ಸುವರ್ಣ ಎನ್ನಿಸಿರುವ ಈ ಹೊತ್ತಿನ ಕಥೆಗಾರರಲ್ಲಿ ಗುರುತಿಸಿಕೊಳ್ಳುವ ಬರಹಗಾರರು. ಕಥಾಸಾಹಿತ್ಯವನ್ನು ಓದುವವರ ನೆಲೆಯಿಂದ ಇವರ ಕಥೆಗಳನ್ನು ನೋಡುತ್ತಾ ಸಾಗಿದ್ದೇನೆ. ಇವರ ಕಥೆಗಳಲ್ಲಿ ಮುಖ್ಯವಾಗಿ ವಾಸ್ತವಿಕತೆ ಅಲ್ಲಲ್ಲಿ ಕಾಲ್ಪನಿಕ ಸನ್ನಿವೇಶಗಳ ನಿರ್ಮಿತಿಯನ್ನು ಕಾಣಬಹುದಾಗಿದೆ. ಇವರ ಕಥೆಗಳು ಸಮಾಜದ ನೋವು, ದ್ವೇಷ ಹಾಗೂ ಪ್ರಾದೇಶಿಕತೆಯ ಗುಣದ ಹಿನ್ನೆಲೆಯಲ್ಲಿ ಬಹಳವಾಗಿ ಚರ್ಚೆಗೆ ಒಳಪಡುತ್ತದೆ. ಇಂದಿನ ಸಾಮಾಜಿಕತೆ, ಸೃಜನಶೀಲತೆ ಹಾಗೂ ತಂತ್ರಜ್ಞಾನದ ಫಲ ಎಂಬಂತೆ ಈ ಕಥೆಗಳು ನಿರೂಪಿತವಾಗುತ್ತವೆ. ಹಲವು ಸಮುದಾಯಗಳನ್ನು ಒಳಗೊಳ್ಳುವ ಎಲ್ಲವನ್ನು ಪ್ರೀತಿಯಿಂದ ನೋಡುವ ಕಲಾತ್ಮಕತೆ ಇವರ ಕಥೆಗಳಲ್ಲಿ ಇವೆ. ಅಪ್ಪನ ಟೆಲಿಗ್ರಾಮ್, ಅನಾಥ ಮನಸ್ಸುಗಳು, ಅಪ್ಪ ಎಂಬ ಪ್ರಾರಬ್ಧ; ಅಮ್ಮನ ಉಪಲಬ್ಧ, ದೇವರ ಜೋಳಿಗೆ, ಅಮ್ಮನ ಆಟೋಗ್ರಾಫ್, ಕ್ಷಣ ಕತ್ತಲೆಯ ಭಯ, ಕಾಮರಾಜನ ವಿಂಡೋಶಾಪಿಂಗ್, ಪೀಪಿಂಗ್‌ಟಾಮ್ ಈ ಕಥೆಗಳಲ್ಲಿ ಕಲ್ಪಕತೆಗಿಂತ ಈ ಕಥೆಗಳು ವಾಸ್ತವವಾದ ನೆಲೆಯಲ್ಲಿ ಕಥನಕ್ರಮ ಸಾಗಿರುವುದನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ. ಈ ಕಥೆಗಳು ಕಾಲಾನುಕ್ರಮದ ಕಥನ ಕ್ರಮಗಳು. ನೇರವಾಗಿ ಕಥೆಯನ್ನು ನಿರೂಪಿಸುವಂತೆ ಕಥೆಗಳು ರೂಪಿತವಾಗಿವೆ.

ಕಥೆಯ ಅಂದಗಾರಿಕೆ ಅಥವ ಪಾತ್ರಗಳ ವಿವರಗಳು ಬಹಳ ಸೂಕ್ಷ್ಮವಾಗಿ ಎದ್ದು ಕಾಣುತ್ತದೆ. ವಿವರಗಳು, ಸೂಕ್ಷ್ಮಗಳು, ಕಥೆಗಾರರನ್ನು ಎಷ್ಟು ಕಾಡಿದೆ ಎಂದರೆ ಕೆಲವು ಸಾರಿ ಕಾದಂಬರಿಗೆ ಹತ್ತಿರವಾದಷ್ಟು ಸಣ್ಣಸಣ್ಣ ವಿವರಗಳನ್ನು ಮನದಟ್ಟು ಮಾಡಲು ಹೋಗಿ ಕಥೆಯ ಮೂಲಜಾಡು ತಪ್ಪುವ ಸಾಧ್ಯತೆಯಿದೆ. ಸಣ್ಣ ಕಥೆ ತನ್ನ ಸಂಕ್ಷಿಪ್ತತೆ, ಚುರುಕುತನದಿಂದ ಕುತೂಹಲವನ್ನು ಹಿಡಿದಿಡುವುದಕ್ಕೆ ನೆರವಾಗುತ್ತದೆ, ಇಲ್ಲದೇ ಹೋದರೆ ಕಥೆಯ ಹುಡುಕಾಟಕ್ಕೆ ಭಂಗ ಬರುತ್ತದೆ.

ಹಲ್ಕಾ ಬದುಕಿನ ನಡುವೆ, ಅನುಸೂಯಮ್ಮನ ಗರಡಿಮನೆ, ಇಂಥ ಕಥೆಗಳಲ್ಲಿ ಬರುವ ಒತ್ತಡ ಇವರ ಸಾಮಾಜಿಕ ಕ್ರೌರ್ಯಕ್ಕೆ ಧ್ವನಿ ಕೊಡುವ ಶಕ್ತಿಯಾಗಿ ರೂಪಿತವಾಗಿವೆ. ಉತ್ತಮ ಬರಹಗಳು ಸಮಾಜದ ದರ್ಶನಕೆ ಹಿಡಿದ ಕನ್ನಡಿಗಳು. ಹೆಣ್ಣನ್ನು ಸಮಾಜ ಆತಂಕದಲ್ಲಿ ಬೇಯುವಂತೆ ಮಾಡುತ್ತದೆ ಎಂದ ಚಿತ್ರಣಗಳನ್ನು ಮನಕರಗುವಂತೆ ತರುತ್ತಾರೆ. ಸ್ತ್ರೀವಾದಿ ನೆಲೆಯ ಚಿಂತಕರೆಂದು ಈ ಕಾರಣದಿಂದ ಗುರುತಿಸಬಹುದು.

ದೇವರಜೋಳಿಗೆ ಫಕೀರರ ಪ್ರಾತಿನಿಧಿಕ ಕಥೆಗಳಲ್ಲಿ ಒಂದು. ದೇವರ ಜೋಳಿಗೆ ಫಕೀರರ ಒಂದು ವಿಶಿಷ್ಟ ಕಥೆ. ಕಥಾವಸ್ತುವಿನಿಂದ ಹಿಡಿದು ಅದರ ಬೆಳವಣಿಗೆ ಹಾಗೂ ಕಥೆ ಕೊನೆಯಾಗುವವರೆಗಿನ ಎಲ್ಲ ಮಜಲುಗಳು ಓದುಗನನ್ನು ಕುತೂಹಲ ಹಾಗೂ ನಿಬ್ಬೆರಗುಗಳಿಂದ ಕಾಡುತ್ತ ಸಾಗುತ್ತವೆ. ಕಥೆಯಲ್ಲಿ ಹೇಳುವ ಪಯಣ ಸಾಂಕೇತಿಕವಾಗಿ

ಜೀವನದ ಅಗಮ್ಯ, ದುರ್ಗಮ ಹಾಗೂ ಕೊನೆಯಿಲ್ಲದ ರಹಸ್ಯವಾಗಿರುವುದನ್ನು ಸಾಂಕೇತಿಕವಾಗಿ ಬಿಂಬಿಸುತ್ತ ಸಾಗಿದೆ.

ಇದುವರೆವಿಗೂ ನಾಸ್ತಿಕನಾಗಿದ್ದ ನಿರೂಪಕ ಗುರುವಿನ ಜೋಳಿಗೆಯಲ್ಲಿ ಬಿದ್ದಾಗ ಅಲ್ಲಿದ್ದ ತನ್ನೆಲ್ಲಾ ಆದರ್ಶ ಹಿರಿಯ, ದೇವರನ್ನು ನಂಬಿದ್ದ ವ್ಯಕ್ತಿಗಳನ್ನು ಕಂಡಾಗ ದೇವರನ್ನು ಕಂಡಂತೆ ಖುಷಿಯಾಗುತ್ತಾನೆ. ಆದುದರಿಂದ ನಾಸ್ತಿಕನೊಬ್ಬನಿಗೆ ದೇವರನ್ನು ಪರಿಚಯಿಸಿದ ಜೋಳಿಗೆ ಇದು. ಆದುದರಿಂದ ದೇವರ ಜೋಳಿಗೆ ಹೆಸರು ಕಥೆಗೆ ಸಮರ್ಪಕ ಎನ್ನಿಸುತ್ತದೆ.

ದೇವರಜೋಳಿಗೆ ಕಥೆಯಲ್ಲಿ ಜೋಳಿಗೆ ಶಬ್ದ-ಬುದ್ಧಿ-ಭಾವನೆಗಳ ಅರ್ಥ-ಅನರ್ಥಗಳ, ನಾಸ್ತಿಕ-ಆಸ್ತಿಕ ದ್ವಂದ್ವಗಳ ಚೀಲ ಎಂಬಂತೆ ಬಿಂಬಿತವಾಗಿದೆ. ಇತ್ತಕಡೆ ಕರ್ನಾಟಕದ ಹಳೆಯ ಮೈಸೂರು ವಲಯದಲ್ಲಿ ಭಿಕ್ಷೆಗಾಗಿ ಹೊರಟ ದಾಸಯ್ಯ ಅಥವಾ ಜಂಗಮ ಅಥವಾ ಬಸವ ಜೋಳಿಗೆ ನೇತುಹಾಕಿಕೊಂಡು ಹೋಗುವುದು ಕಂಡಿದ್ದೇವೆ. ಆದರೆ, ಗುರುವಿನ ಜ್ಞಾನದ ಜೋಳಿಗೆಯಲ್ಲಿ ನಿರೂಪಕರಿದ್ದು ಜೋಳಿಗೆಯಿಂದಲೇ ತನ್ನ ಗುರುವಿನ ಜೊತೆ ಮಾತನಾಡುತ್ತಾ ಸಾಗಿದ ಹಾಗಿದೆ. ಅಂದರೆ ನಿರೂಪಕರು ಮೂಲತಃ ನಾಸ್ತಿಕರು, ಆ ನಾಸ್ತಿಕ ಮನಸ್ಸು ಆಸ್ತಿಕ ಮನಸ್ಸಿನೊಡನೆ ಚರ್ಚೆಗಿಳಿದು ದೇವರ ಅಸ್ತಿತ್ವ ಹುಡುಕಿ ಹೊರಟ ಸಾಧಕತನ ಬಹಳ ಹದವಾಗಿ ಕತೆಯಲ್ಲಿ ಚಿತ್ರಿತವಾಗಿದೆ. ದಿಕ್ಕುತಪ್ಪಿ ಕಂಗೆಟ್ಟ ಶಿಷ್ಯನ ಹಾಗೆ ಅವರ ನಾಸ್ತಿಕ ಮನಸ್ಸು ಗೋಜಲು, ದ್ವಂದ್ವಗಳಂದ ಕೂಡಿದ ಸಂದರ್ಭದಲ್ಲಿ ಇದ್ದಕ್ಕಿದ್ದಂತೆ ಈ ಸಂದಿಗ್ಧವನ್ನು ಬಗೆಹರಿಸಲು ಬಂದ ಗುರುವಿನಂತೆ ದೇವರಗುಡ್ಡಕ್ಕೆ ನಿರೂಪಕರನ್ನು ಕರೆದೊಯ್ಯುವ ಹಾಗೂ ಪಯಣದ ಉದ್ದಕ್ಕೂ ದೂರದ ದೇವರ ಗುಡ್ಡದಲ್ಲಿ ಇರುವ ಅಮ್ಮನ ದರ್ಶನಕ್ಕಾಗಿ ಹೋರಾಟ ಮನಸ್ಸು ತನ್ನ ಹಿಂದಿನ ಜನ್ಮಗಳ ನೆನಪು ಹಾಗೂ ಕರ್ಮಪಾಕಗಳ ವಾಸನೆಯಿಂದ ಮುಂದೆ ಅಡಿ ಇಡಲು ತಡೆಯುತ್ತಾ ಹಲವಾರು ರೀತಿಯಲ್ಲಿ ಪಯಣವನ್ನು ದಿಕ್ಕುಗೆಡಿಸುವಂತೆ ಮಾಡುವ ಚಿತ್ರಣಗಳಂತೂ ಕಥೆಯಲ್ಲಿ ಬಹಳ ದೀರ್ಘವಾಗಿದ್ದರೂ ಓದುಗನನ್ನು ಮುಂದೇನು ಎಂಬ ಕಾತುರದಲ್ಲೇ ಮುಳುಗುವಂತೆ ಮಾಡುತ್ತದೆ. ನಿರೂಪಕ ಗುಡ್ಡಕ್ಕೆ ಹೊರಟ ಸಮಯ ಕಾರ್ಗತ್ತಲು ಮೂರು ಮೈಲಿ ಕಾಡಿನ ಆಚೆ ಇರುವ ಬೆಟ್ಟದ ತುದಿಯ ಅಮ್ಮನ ಅಸ್ತಿತ್ವವನ್ನೇ ಸಾರಿ ಹೇಳುವಂತೆ ಡೊಳ್ಳುನಗಾರಿಗಳಂತೆ ಸದ್ದು, ನಿಶ್ಯಬ್ದವನ್ನು ಬೇಧಿಸಿಕೊಂಡು ಸಣ್ಣಗೆ ಕೇಳುತ್ತಾ ಇದೆ. ಗುಡ್ಡಕ್ಕೆ ಹೊರಟ ಮಂದಿ ಜೊತೆಗಿದ್ದರೂ ಅವರ ಅವರ ಪಯಣ ಅವರದ್ದು ಎಂಬಂತೆ ಅಂದರೆ ಅವರ ಜೀವನ ಅವರವರಿಗೆ ಎಂಬಂತೆ ಸಾಗುತ್ತಿದ್ದಾರೆ. ಕತ್ತಲೆ ದಟ್ಟೈಸುತ್ತಿದ್ದಂತೆ ಜೊತೆಗಿದ್ದವರ ಮಾತುಗಳು ಪಿಸು ಮಾತುಗಳಂತೆ, ಕೆಲವೊಮ್ಮೆ ಗೂಬೆಗಳ ಕೂಗುಗಳಂತೆ, ಕೆಲವೊಮ್ಮೆ ಭಯಾನಕವಾದ ಘರ್ಜನೆಗಳಂತೆ, ಚೀತ್ಕಾರಗಳಂತೆ, ಕಾರ್ಗತ್ತಲೆಯಲ್ಲಿ ಕೇಳಿ ಬರುತ್ತಿವೆ. ದಾರಿಯ ಈ ಒಂಟಿ ಪಯಣ ಕ್ಷಣಕ್ಷಣಕ್ಕೂ ಭೀತಿ ಹುಟ್ಟು ಹಾಕುತ್ತಾ ಸಾಗುತ್ತಿದೆ. ಈ ಅಸ್ಪಷ್ಟ ಧ್ವನಿಗಳು ಬರುಬರುತ್ತಾ ಪ್ರೇತಾತ್ಮ, ದೆವ್ವ, ಭೂತಗಳ ಕಾಟವಿರಬಹುದೇ ಎಂಬ ಸಂದೇಹಕ್ಕೂ ಎಡೆಮಾಡಿಕೊಟ್ಟಿದೆ.

ತನ್ನ ಜೀವನದ ಇಡೀ ಆಯುಷ್ಯ ದೇವರು ಇಲ್ಲವೆಂದು ಭಾವಿಸಿದ ಆತನಿಗೆ ದೇವರಿದ್ದಾನೆ ಎಂಬ ಸತ್ಯದರ್ಶನಕ್ಕಾಗಿ ತಾನೇ ದೇವರ ಗುಡ್ಡದತ್ತ ಸಾಗಿದ್ದಾರೆ. ನಿರೂಪಕರು ದೇವರ ಗುಡ್ಡದಲ್ಲಿ ಅಮ್ಮ ಪ್ರತ್ಯಕ್ಷಳಾಗುತ್ತಾಳೆ ಎಂಬ ಸನ್ಯಾಸಿಯ ಭರವಸೆಯೊಂದಿಗೆ ತಾನೇ

ದೇವರ ಇರುವಿಕೆಯನ್ನು ಪರೀಕ್ಷಿಸಿ ನೋಡೇ ತೀರುವ ಹಠದಲ್ಲಿ ಬೆನ್ನಹಿಂದೆ ಕಾಡುತ್ತಿರುವ ಭಯಾನಕ ಕರಾಳ ಶಬ್ದಗಳಾಗಲೀ, ಆ ರಾತ್ರಿಯಾಗಲಿ, ಪ್ರತಿ ಹೆಜ್ಜೆಗೂ ದೊಡ್ಡ ಕಂದಕಕ್ಕೆ ಬೀಳುತ್ತಿದ್ದೇನೆ ಎಂಬ ಭೀತಿಯಾಗಲಿ ಅಥವಾ ನಿಂತರೆ ಮುಂದೆ ತಳ್ಳುವ ಅನುಭವವಾಗಲಿ ಇಲ್ಲಿ ಅವರ ಪಯಣಕ್ಕೆ ಅಡ್ಡಿ ತರಲಿಲ್ಲ. ದೂರದ ಬೆಟ್ಟದ ನಿನಾದ ಧೈರ್ಯ ತುಂಬಿಕೊಡುತ್ತಾ ಆ ಕರಾಳ ರಾತ್ರಿಯನ್ನು ಸವೆಸುವಂತೆ ಮಾಡಿತ್ತು. ಬುದ್ಧಿ ಮನಸ್ಸುಗಳು ತನ್ನ ಹಾಗೂ ಬರಿಗಾಲಿನ ಸನ್ಯಾಸಿಯ ಜಟಾಪಟಿಯ ನಡುವೆ ಕಾಣದ ತುಡಿತ, ಹುಡುಕಾಟ ನಿರೂಪಕರನ್ನು ಗುಡ್ಡದತ್ತ ತಮಗೆ ಅರಿವಿಲ್ಲದಂತೆ ಎಳೆದೊಯ್ಯತೊಡಗಿತ್ತು. ಒಂದುವೇಳೆ, ತನ್ನ ಮುಂದೆ ಅಮ್ಮ ಪ್ರತ್ಯಕ್ಷಳಾಗಿ ಯಾವೆಲ್ಲ ರೂಪದಲ್ಲಿ ಕಾಳಿ, ರುದ್ರೆ, ಭಯಂಕರಿಯಾಗಿ ತನ್ನ ಮುಂದೆ ಪ್ರತ್ಯಕ್ಷಳಾಗಬಹುದು ಎಂಬುದನ್ನು ಕಲ್ಪಿಸಿಕೊಳ್ಳುತ್ತ ಬುದ್ಧಿ ಮನಸ್ಸುಗಳು ಅನಾಮಿಕ ಪಕ್ಷಿಗಳಂತೆ ಹಾರತೊಡಗಿದವು. ದೂರದಿಂದ ತನ್ನಲ್ಲಿಗೆ ಬರುತ್ತಿರುವ ಬೆಳಕಿನ ರೂಪ ಬರಿಗಾಲಿನ ಸನ್ಯಾಸಿಯು ಹತ್ತಿರಕ್ಕೆ ಬಂದಾಗ ಸ್ಪಷ್ಟವಾಯಿತು. ಆತ ತನ್ನ ಪ್ರೀತಿಯ ಕೈಗಳಿಂದ ಎತ್ತಿ ಹಿಡಿದಾಗ ತಾನು ಹಾಸಿಗೆಯ ಮೇಲೆ ಮಲಗಿದಂತೆ ಎನ್ನಿಸಿ, ತನ್ನ ಜೋಳಿಗೆಯಲ್ಲಿ ಸೇರಿಸಿಕೊಂಡು ಇದುವರೆಗೂ ತಾನು ಹುಡುಕುತ್ತಿದ್ದ ಬದುಕಿನ ರಹಸ್ಯ ಆ ಕ್ಷಣದಲ್ಲಿ ಆ ಪುಟ ಜೋಳಿಗೆಯಲ್ಲಿ ಬಿಚ್ಚಿಡಲ್ಪಟ್ಟಿತ್ತು. ತಾನು ಇಷ್ಟು ವರ್ಷ ಯಾರೆಲ್ಲರನ್ನು ಮಹಾತ್ಮರೆಂದು ಭಾವಿಸಿದ್ದರೋ ಅಷ್ಟು ವ್ಯಕ್ತಿಗಳು ಧ್ಯಾನಸ್ಥರಾಗಿ ಇರುವುದನ್ನು ಕಂಡಾಗ ನಿರೂಪರಿಗೆ ಅವರೆಲ್ಲರನ್ನು ಕಣ್ಣುತುಂಬಿಕೊಳ್ಳುವ ಅವಕಾಶ ದೊರಕಿತು. ಇಂತಹ ಮಹಾತ್ಮರುಗಳ ಜೊತೆಗೆ ತನ್ನಂತಹ ನಾಸ್ತಿಕರನ್ನೇ ಏಕೆ ಜೋಳಿಗೆಗೆ ಹಾಕಿಕೊಂಡಿದ್ದಾನೆ ಎಂಬ ಪ್ರಶ್ನೆಯು ಹುಟ್ಟಿತ್ತು. ಗುರಿಯಿಲ್ಲದ ದಾರಿಯಲ್ಲಿ ಗುರುವಂತೆ ಬಂದ ದೇವರ ಜೋಳಿಗೆಯು ಒಂಟಿತನದ ಕತ್ತಲಿನಲ್ಲಿ ಕಾಣದ ಹೆಜ್ಜೆಗಳು ಭಗವಂತನ ಇರುವಿಕೆಯ ಅನುಭವದ ಒಳ ಧ್ವನಿಯನ್ನು ಅಂತಃಕರಣದಿಂದ ನಿರೂಪಕರು ಭಾವಿಸಿದ್ದರು.

ಇದು ಒಂದು ಒಂಟಿ ಪಯಣ. ನಿಶ್ಯಬ್ದ ಸದ್ದು ದೊಡ್ಡ ಬಾವಿಯಲ್ಲಿ ಬಿದ್ದ ಅನುಭವ, ಅಮ್ಮನ ರೌದ್ರರೂಪ, ತಾನು ಬೆತ್ತಲಾಗುವ ರೀತಿ, ಅನಾತ್ಮ ವ್ಯಕ್ತಿಯ ಹೆಜ್ಜೆಗಳು ಇಂತಹ ಮಾತುಗಳು ಕಥೆ ಉದ್ದಕ್ಕೂ ಅಸ್ಪಷ್ಟ ಪ್ರಪಂಚದತ್ತ ಸಾಧಕನೊಬ್ಬನನ್ನು ಕರೆದೊಯ್ಯುವ ಕಾಳರಾತ್ರಿಯ ಅನುಭವವನ್ನೇ ತರುವಲ್ಲಿ ಯಶಸ್ವಿಯಾಗಿದೆ. ದೇವರ ಅಸ್ತಿತ್ವವನ್ನು ಬಹಳ ಚೆನ್ನಾಗಿ ನಿರೂಪಿಸುತ್ತ ಭಾಷೆಯನ್ನು ಚೆನ್ನಾಗಿ ದುಡಿಸಿಕೊಂಡಿದ್ದಾರೆ.

ಹಾಗೆಯೇ, ಕ್ಷಣ ಕತ್ತಲೆಯ ಭಯದಲ್ಲಿ ಜೀವನದ ಅನುಕ್ಷಣ ಕತ್ತಲಾಗಿ ಬಿಟ್ಟಿತು. ಲಾರಿ ಡ್ರೈವರ್‌ನು ಬದುಕಿನ ವರ್ಣನೆ ಅಪರೂಪದ್ದು ಹೌದು. ಇವನ ಲಾರಿಗೆ ಸಿಕ್ಕಿ ಮರಣಿಸಿದ ಆ ಎರಡು ಹೆಣ್ಣುಗಳು ಕಥೆಯ ಕೊನೆಯಲ್ಲಿ ಷಾಕ್ ಕೊಡುತ್ತವೆ. ಲಾರಿ ಡ್ರೈವರ್‌ಗಳು, ಕ್ಲೀನರ್‌ಗಳ ಬಗೆಗಿನ ಕಥೆಗಳೂ ಬಹಳ ವಿರಳ. ಕ್ಷಣ ಕತ್ತಲೆಯ ಭಯ ಹೆಸರಿನೊಂದು ಕಥೆ ರಾಷ್ಟ್ರೀಯ ಹೆದ್ದಾರಿಯಲ್ಲಿನ ಕತ್ತಲು ಡಾಬಾ, ಟ್ರಕ್ ಡ್ರೈವರ್‌ನ ವಿಕ್ಷಿಪ್ತ ಬದುಕು. ಚಕ್ರಕ್ಕೆ ಮೆತ್ತುವ ರಕ್ತ, ತೆಳು ಮಣ್ಣಿಗೆ ಅಂಟಿ ಮಾಯವಾಗುತ್ತದೆ. ಹೋಯಿತು ಎನ್ನುವ ಸಾಲುಗಳು ಕ್ಷಣ ಕ್ಷಣಕ್ಕೂ ಕುತೂಹಲವನ್ನು ಹೆಚ್ಚಿಸುತ್ತಾ ಹೋಗುತ್ತವೆ.

ಅಲೆಮಾರಿ ಹಾಗೂ ಹೆಂಗಸಿನ ಚಟ ಇರುವಂತಹ ಕರಿಬಸಪ್ಪ ಲಾರಿ ಡ್ರೈವರ್‌ನಾದ ತನ್ನ ಪ್ರಯಾಣದ ಉದ್ದಕ್ಕೂ ನೆನಪುಗಳು ತನ್ನನ್ನು ಪಶ್ಚಾತ್ತಾಪದತ್ತ ಕೊಂಡುಹೋಗುತ್ತದೆ. ತನ್ನ ಹೆಂಡತಿಯನ್ನು ಅನುಮಾನ ಪಟ್ಟು ತವರಿಗೆ ಅಟ್ಟಿ, ಒಂದು ದಿನ ರಾಷ್ಟ್ರೀಯ ಹೆದ್ದಾರಿಯಲ್ಲಿ ಸರಕುಗಳನ್ನೇ ಕೊಂಡೊಯ್ಯುತ್ತಿದ್ದ ಲಾರಿ ಆಕ್ಸಿಡೆಂಟ್ ಮಾಡಿ, ಅಲ್ಲಿ ಲಾರಿ ನಿಲ್ಲಿಸದೆ ತಾನು ಬಾಂಬೆ ತಲುಪುತ್ತಾನೆ. ಆಕ್ಸಿಡೆಂಟ್ ಮಾಡಿದ ಸನ್ನಿವೇಶ ನೆನೆಸಿಕೊಂಡು ಬೇಸರಗೊಂಡಿದ್ದಾಗ ಲಾರಿ ಕ್ಲೀನರ್ ಹೇಳುವ ಮಾತು ಬೇಸರ ಉಂಟು ಮಾಡಿ ತನ್ನ ಹೆಂಡತಿಯನ್ನು ನೆನಪು ಮಾಡಿಕೊಳ್ಳುವ ಪರಿ. ಆ ನೆನಪು ಪಶ್ಚಾತ್ತಾಪದೊಂದಿಗೆ ಮತ್ತೆ ತನ್ನ ಹೆಂಡತಿ ಮಕ್ಕಳನ್ನು ನೋಡಲು ಹೋದರೆ ಹೆಣವಾಗಿರುವ ಸಂಗತಿ ತಿಳಿದು, ಆ ಆಕ್ಸಿಡೆಂಟ್ ತನ್ನಿಂದಲೆಯಾಗಿದೆ ಎಂದು ಹೆಂಡತಿಯ ಮುಖ ತಾನು ಹಿಂದೆ ಹೀಗೆ ತನ್ನ ಹೆಂಡತಿಯ ಮುಖ ನೋಡದೆ, ತನ್ನ ಮನದಾಳದ ನೆನಪಿನ ಮುಖ ಹಾಗೆ ಇರಲಿ ಎಂದು ಸತ್ತ ಹೆಣದ ಮುಖವನ್ನು ನೋಡದೆ ವಾಪಸ್ಸಾಗುತ್ತಾನೆ. ಜೀವನದ ಕೊನೆಯ ಹಂತದಲ್ಲಿ ತನ್ನವರು ಎಂದು ಪ್ರೀತಿ ಹುಟ್ಟಿದರು ಅವರನ್ನು ಸೇರಲಾಗದೆ ಹೋದ ದುಃಖ ಒಂದು. ಆದರೆ, ತಾನೇ ತನ್ನ ಕೈಯ್ಯಾರೆ ಅವರ ಬದುಕಿನುದ್ದಕ್ಕೂ ಕಣ್ಣೀರು ಇಟ್ಟುಕೊಂಡು ಕೊನೆಗೆ ಹೆಂಡತಿ ಮತ್ತು ಮಗಳ ಪಾಲಿಗೆ ತಾನೇ ಯಮನಾದ ಬಗ್ಗೆ ಪಶ್ಚಾತ್ತಾಪ ಪಡುತ್ತಾ ಕಂಗೆಟ್ಟ ರೀತಿ ಈ ಕಥೆಯು ಸಾಗುತ್ತದೆ.

ಈ ಕಥೆಯು ರಾಷ್ಟ್ರೀಯ ಹೆದ್ದಾರಿಯಲ್ಲಿ ಸಾಗುತ್ತದೆ. ಕರಿಬಸಪ್ಪ ಒಬ್ಬ ಲಾರಿ ಡ್ರೈವರ್. ತುಂಬಾ ವರ್ಷಗಳಿಂದ ಲಾರಿ ಡ್ರೈವರ್ ಆಗಿದ್ದ. ಕರಿಬಸಪ್ಪ ಪೂನಾಗೆ ಸರಕು ಸಾಗಿಸಬೇಕಾಗಿರುತ್ತದೆ. ಅದಕ್ಕೆ ಮೊದಲು ಕರಿಬಸಪ್ಪನಿಗೆ ಸಂಬಳವಾಗಿರುತ್ತದೆ. ಆದ್ದರಿಂದ ಡಾಬಾಗೆ ಹೋಗಿ ಚಿಕನ್ ಕಬಾಬ್, ತಂದೂರಿ ಚಿಕನ್, ಬೆಂಡ್ ಮಸಾಲ, ತಂದೂರಿ ರೋಟಿ, ಆಲೂಪರೋಟಾ, ಗೀ ರೈಸ್ ತಿಂದು, ಕುಡಿದು ರಾತ್ರಿ 12 ಗಂಟೆಗೆ ಹೊರಟರು. ರಾತ್ರಿಯ ವೇಳೆ ಗಾಡಿಗಳು ಜಾಸ್ತಿಯಾಗಿ ಬರುತ್ತಿದ್ದವು. ಕರಿಬಸಪ್ಪ ಬೈಯ್ದುಕೊಂಡು ಹೋಗುತ್ತಿದ್ದ.

ಲಾರಿಯಲ್ಲಿ ಹೋಗಬೇಕಾದರೆ ಯಾರಾದರೂ ಪೂನಾಕ್ಕೆ ಜನರು ಬರುತ್ತಾರಾ ನೋಡು ಬಸ್ಯಾ ಎಂದು ಲಾರಿಯ ಕ್ಲೀನರ್‌ಗೆ ಹೇಳುತ್ತಾನೆ. ಯಾರು ಸಿಗಲಿಲ್ಲ. ಕರಿಬಸಪ್ಪ ದಾರಿಯಲ್ಲಿ ಬರುವ ಗಾಡಿಗಳನ್ನು ಸೈಡ್ ಹೊಡೆದು ಮುಂದೆ ಹೋಗುತ್ತಿದ್ದ. ಬಸ್ಯಾ ಕರಬಸಪ್ಪನಿಗೆ ತಮಾಷೆ ಮಾಡಿಕೊಂಡು ಹಾಡು ಹೇಳಿಕೊಂಡು ಕರಿಬಸಪ್ಪನಿಗೆ ರಾತ್ರಿ ವೇಳೆ ಬೇಸರವಾಗದಂತೆ ಬಸ್ಯಾ ಮಾಡುತ್ತಿದ್ದ. ಕರಿಬಸಪ್ಪ ಗಂಭೀರವಾಗಿ ಗಾಡಿ ಓಡಿಸುತ್ತಿದ್ದ, ಬಸ್ಯಾನಿಗೆ ಸಣ್ಣಗೆ ನಿದ್ದೆ ಆವರಿಸಿಕೊಂಡಿತು.

ಹೆದ್ದಾರಿಯ ಅಕ್ಕ ಪಕ್ಕ ಪ್ರಕಾಶಮಾನವಾಗಿ ಉರಿಯುತ್ತಿದ್ದ ಸೋಡಿಯಂ, ಸೋಲಾರ್ ಲೈಟುಗಳು ಸ್ಟೇರಿಂಗ್ ಹಿಡಿದ ಕರಿಬಸಪ್ಪನಿಗೆ ಕಣ್ಣುಗಳು ಒಂದು ಕ್ಷಣ ಮಂಜಾಯಿತು.

[1] 'ಢಗ್... ಡಗ್...ಅನ್ನುವ ಶಬ್ದ... ಅಮ್ಮಾ ಅನ್ನುವ ಕಿರುಚು...!'

ತೂಕಡಿಸಿ ಕುಳಿತಿದ್ದ ಬಸ್ಯಾ ಆ ಕ್ಷಣದಲ್ಲೇ ಎಚ್ಚರವಾಗಿ, ಎದ್ದು ಗತಿಯಿಲ್ಲದೆ ಸಾಗುತ್ತಿದ್ದ ಸ್ಟೇರಿಂಗನ್ನು ಹಿಡಿದು 'ಅಣ್ಣಾ' ಎಂದು ಕೂಗಿದ.

ಆ ಕ್ಷಣ ಮಿಂಚಿ ಮರೆಯಾಗಿ ಹೋಗಿತ್ತು ಆ ಕ್ಷಣ ಕಣ್ಣು ಕತ್ತಲು ಮನಸಿಗೆ ಹಿಡಿದ ಜೋಮಿನಿಂದ ಎಚ್ಚೆತ್ತು ಏನಾಯಿತು ಎಂದು ಗಾಬರಿಗೊಂಡು ಕೆಳಗಿಳಿಯಲು ಪ್ರಯತ್ನ ಮಾಡಿದ ಆದರೆ ಬಸ್ಯಾ ಅಣ್ಣಾ ಇಳಿಯಬೇಡ ಎಂದು ಹೇಳಿದ ಇಳಿದರೆ ನಮಗೆ ಪ್ರಾಬ್ಲಂ ಬೇಡ. [2]'ಎರಡು ಹೆಣಗಳು ರಕ್ತದ ಮಡುವಿನಲ್ಲಿ ಮಲಗಿದ್ದವು. ಒಬ್ಬಳ ದೇಹದ ಮೇಲೆ ಲಾರಿ ಹರಿದಿತ್ತು. ನೆಲಗಂಟಿದ ಸಗಣಿಯಂತಾಗಿದ್ದ ಅವಳ ದೇಹ ನೋಡಲು ಸುಮಾರು 40 ವರ್ಷದ ಆಸುಪಾಸಿನವಳಂತೆ ಕಾಣುತ್ತಿತ್ತು. ಇನ್ನೊಬ್ಬಳು ಕೂಡ ಹೆಂಗಸೇ..! ಅವಳು ಸೊಂಟದ ಕೆಳಗಿನ ಭಾಗದ ಮೇಲೆ ಗಾಡಿ ಸಲೀಸಾಗಿ ಹತ್ತಿ ಇಳಿದಿತ್ತು. ಅಣ್ಣ ಆಕ್ಸಿಡೆಂಟ್ ಆಗಿ ಹೋಗಿದೆ. ಇಬ್ರೂ ಅಲ್ಲೇ ಸ್ಪಾಟ್ ಆಗಿದ್ದಾರೆ. ಏನ್ ಮಾಡೋದು...?

ಬಸ್ಯಾ ಕರಿಬಸಪ್ಪನಿಗೆ ಅಣ್ಣಾ ಬೇಡ ಅವರ ಸತ್ತು ಹೋಗಿದ್ದಾರೆ ನಾವು ಇನ್ನೇನು ಮಾಡಲು ಮಾಡಲು ಆಗುವುದಿಲ್ಲ ಬನ್ನಿ ಹೋಗಿ ಬಿಡೋಣ 'ನಾಳೇನೇ ಮಾಲು ದೊಡ್ಡ ಪಾರ್ಟಿಗೆ ತಲುಪಬೇಕು ಎಂದು ಬಲವಂತವಾಗಿ ಕರೆದುಕೊಂಡು ಹೋಗುತ್ತಾನೆ. ಕರಿಬಸಪ್ಪನಿಗೆ ಒಂದೇ ರೀತಿಯ ಶಾಕ್ 20 ವರ್ಷದಲ್ಲಿ ಒಂದು ದಿನವಾದರೂ ಒಂದು ಆಕ್ಸಿಡೆಂಟ್ ಮಾಡದ ನನಗೆ ಹಿಂದು ಏಕೆ ಹೀಗಾಯಿತು ಎಂದು ಮನಸ್ಸಿಗೆ ತುಂಬ ಬೇಸರವಾಯಿತು.

ಕರಿಬಸಪ್ಪನಿಗೆ ಆ ಇಬ್ಬರನ್ನೇ ನೋಡಿಕೊಂಡು ಹೋಗಬೇಕಿತ್ತು ಪಾಪ ಒಬ್ಬಳು ಹೆಂಗಸು ಇನ್ನೊಬ್ಬಳು ಹುಡುಗಿ ಪಾಪ ಏನಾಯಿತು ಅದಕ್ಕೆ ಬಸ್ಯಾ ಅಣ್ಣಾ ನಾವು ಹೋದರೆ ಪೋಲೀಸರು ನಮ್ಮನ್ನು ಹಿಡಿದು ಜೀವ ತೆಗೆದು ಬಿಡುತ್ತಾರೆ ಎರಡು ಹೆಣಗಳು ಉಳುಳಿವೆ ಎಲ್ಲೋ ಒಂದು ಕಡೆ ಒಂದು ಕ್ಷಣ ಮೈಮರತ ಪಾಪಪ್ರಜ್ಞೆ ಕರಿಬಸವನಿಗೆ ಕಾಡಲಾರಂಭಿಸಿತು. ಜನರು ಆಕ್ಸಿಡೆಂಟ್ ಮಾಡಿದವನಿಗೆ ಕೆಟ್ಟದಾಗಿ ಬೈಯಲು ಪ್ರಾರಂಭಿಸಿದರು.

ಬಸ್ಯಾ ಆಕ್ಸಿಡೆಂಟ್ ಮಾಡಿದ್ದು ನಾವು ಇಂಥಾ ಸಮಯದಲ್ಲಿ ನಾವು ಪೋಲೀಸರಿಗೆ ಸಿಕ್ಕಿದರೆ ಏನು ಮಾಡುವುದು ಎಂದ. [3]"ಅಣ್ಣಾ, ಇದು ಪೋಲೀಸ್ರು ಬರೋ ಹೊತ್ತು. ಇನ್ನು ಸ್ವಲ್ಪೊತ್ತು ಇಲ್ಲೇ ನಿಂತ್ಕೊಂಡ್ರೆ ಯಾರಾದ್ರೂ ಗಾಡಿ ನಂಬರ್ ನೋಟ್ ಮಾಡಿಕೊಂಡು ಪೋಲಿಸ್ರಿಗೆ ಕೊಟ್ರೆ, ನಮಗೇ ಡೇಂಜರ್! ನಿಂಗಾದ್ರೂ ಯಾರಿದ್ದಾರೆ? ನೀನು ಪೋಲೀಸು, ಕೋರ್ಟು ಅಂತ ಅಲಿಬೋದು. ಆದರೆ ನನಗಂತು ಹೆಂಡ್ತಿ ಇದಾಳ, ಅಮ್ಮ ಅಣ್ಣಂದಿರು ಇದಾರ. ನಂಗೆ ಈ ಕೋರ್ಟ್ ಅಂತೆಲ್ಲಾ ಅಲಿಯ್ಯಕ್ಕೆ ಖರ್ಚು ಕೂಡ ಮಾಡಕ್ಕಾಗಲ್ಲ' ಅಂತ ಬಸ್ಯಾ ಕೂಡ ಜೋರಾಗಿ ಮಾತಾಡಿದ".

ಕರಿಬಸಪ್ಪನಿಗೆ ಬಸ್ಯಾನ ಮಾತು ಬೇಸರವಾಯಿತು. ಸುಮಾರು ಕಿಲೋಮೀಟರ್ ಹೇಗೆ ಓಡಿಸಿದ ಎಂದು ಗೊತ್ತಾಗಲೇಯಿಲ್ಲ. ಕರಿಬಸಪ್ಪನಿಗೆ ಬಸ್ಯಾ ಹೇಳಿದ ಗುಯ್ ಅಂತಲ್ಲೆ ಇತ್ತು ನನಗೂ ಹೆಂಡ್ತಿ ಮಗು ಇದ್ರು ನಾವಿಬ್ಬರೂ ಚೆನ್ನಾಗಿದ್ವಿ ಮದುವೆಗೆ ಮುಂಚೆ ನಾನು ಕ್ಲೀನರ್ ಆಗಿದ್ದೆ.

ಅವಳ ಕಾಲ್ಗುಣದ ಹಿಂದೆಯೇ ನನಗೆ ಡ್ರೈವರ್ ಆಗಿದೆ. ಇಂತಹ ಹೆಂಡತಿಯನ್ನು ಯಾಕೆ ಬಿಟ್ಟೆ ಅಂತ ಸುಂದರ ಒಳ್ಳೆಯ ಹೆಂಡತಿಯನ್ನು ಬಿಟ್ಟು ನನ್ನ ಕಷ್ಟ ಸುಖ ರಾತ್ರಿ ಹಗಲಿರುಳು ಪರಿವೆಯಿಲ್ಲದೆ ನನ್ನ ಹಾಸಿಗೆಯ ಸುಖಕ್ಕೆ ದೇಹ ನೀಡಿದ್ದ ಹೆಣ್ಣನು ಯಾಕೆ ಬಿಟ್ಟೆ ಆಕೆಯನ್ನು ಬಿಟ್ಟು ನಾನು ಯಾಕೆ ಬೇರ ಹೆಂಗಸರ ಸಹವಾಸ ಮಾಡಿದೆ. ಅವಳ ಮೇಲೆ ಇದ್ದ ಅತಿಯಾದ ಪ್ರೀತಿಯೇ ಅನುಮಾನಕ್ಕೆ ಕಾರಣವಾಯಿತು. ಮೊದಲು ಅವಳು ಹೇಳಿದ ಸತ್ಯ ಮದುವೆಗೆ ಮುಂಚೆಯೇ ಅವಳು ಇನ್ನೊಬ್ಬನೂ ಪ್ರೀತಿಸಿದ್ದಳು ಅವನ ಜೊತೆ ರಾತ್ರಿಯನ್ನು ಕಳೆದ ವಿಷಯ ಹರೆಯದ ವಯಸ್ಸಿನಲ್ಲಿ ಮಾಡಿದ್ದೆ ಎಂದು ಗೋಗರೆದು ಹೇಳಿದ್ದಳು. ಕರಿಬಸಪ್ಪ ಈ ವಿಷಯದ ಬಗ್ಗೆ ತಲೆ ಕೆಡಿಸಿಕೊಂಡು ಕರಿಬಸಪ್ಪ ಕ್ಷಮಿಸಬಹುದಿತ್ತು ಅವಳು ಯಾವುದೇ ಅಂಜಿಕೆಯಿಲ್ಲದೆ ಹಂಚಿಕೊಂಡಿದ್ದಳು ಎಲ್ಲವನ್ನು ಕ್ಷಮಿಸಬಲ್ಲ ಎಂಬ ನಂಬಿಕೆಯಿಂದ ಹೇಳಿಕೊಂಡಿದ್ದಳು.



ಅವಳು ಆ ಪ್ರೀತಿಸಿದ ಹುಡುಗನನ್ನೇ ಮದುವೆಯಾಗುತ್ತಾನೆ ಎಂಬ ನಂಬಿಕೆ ಇತ್ತು. ಆದರೆ ಆ ಹುಡುಗ ಸಾಲ ಮಾಡಿ ಸತ್ತು ಹೋದ. ಈ ವಿಷಯವನ್ನು ಕರಿಬಸಪ್ಪನ ತಂದೆ-ತಾಯಿಗೆ ಹೇಳಿದ್ದರು. ಕರಿಬಸಪ್ಪ ಕಂಡ ಕಂಡ ಹೆಂಗಸರ ಸಹವಾಸ ಮಾಡುತ್ತಿದ್ದ ಈ ಸಹವಾಸವನೇ ಬಿಡಿಸಬೇಕು ಎಂದು ಮದುವೆ ಮಾಡಿದರು. ಆದರೆ ಕರಿಬಸಪ್ಪ ಇದನೆಲ್ಲ ಮರೆತು ಅವಳ ಮೇಲೆ ಅನುಮಾನು ಪಟ್ಟು ಅವಳನ್ನು ತವರು ಮನೆಗೆ ಕಳುಹಿಸಿಬಿಟ್ಟು.

ಹೀಗೆ ಕರಿಬಸಪ್ಪ ನೆನಪು ಮಾಡಿಕೊಳ್ಳುತ್ತ ಪೂನಾ ತಲುಪುತ್ತಾನೆ. ಪೂನಾಗೆ ಸಾಗಿಸಬೇಕಾದ ಮಾಲ್‌ಗಳನ್ನು ಸೇರಿಸಿ ತನ್ನ ಹೆಂಡತಿ ಮಕ್ಕಳನ್ನು ನೋಡುವ ಆಸೆ ಪಡುತ್ತಾನೆ. ಕ್ಷಣ ಕತ್ತಲೆಯ ಸುಳಿಯಲ್ಲಿ ಸಿಲುಕಿ ಅವಳ ಮೇಲೆ ತಪ್ಪು ಹೊರಿಸಿದ್ದ. ಪ್ರಾಯಶ್ಚಿತ್ತ ನೋವನ್ನು ತುಂಬಿಕೊಂಡು ಇಷ್ಟು ವರ್ಷ ಕಳೆದು ಮತ್ತೆ ಅಲ್ಲಿಗೆ ಹೋದರೆ ಹೆಂಡತಿ ಮತ್ತೊಮ್ಮೆ ನನ್ನನ್ನು ಕ್ಷಮಿಸಿಯಾಳೇ? ಮಗಳು ಎಷ್ಟು ದೊಡ್ಡವಳಾಗಿರಬಹುದು ಎಂದು ಅವಳ ಒಂಟಿ ಹೆಂಗಸು ಗಂಡ ಇವಳನ್ನು ಬಿಟ್ಟು ಹೋಗಿದ್ದಾನೆ ಸಮಾಜದ ನಡುವೆ ಈಕೆ ಹೇಗೆ ಬದುಕಿದ್ದಾಳೋ? ಏನಾದರೂ ಆತ್ಮಹತ್ಯೆ ಮಾಡಿಕೊಂಡಿದರೆ ಎಂದು ಅನೇಕ ಯೋಚನೆ ಮಾಡುತ್ತಾ ಕರಿ ಬಸಪ್ಪ ಮತ್ತೆ ಅವಳ ಹತ್ತಿರ ಹೋಗಲು ಬಯಸುತ್ತಾನೆ. ಈ ರೀತಿಯ ಸಂದರ್ಭ ಬರಬಹುದೆಂದು ಸ್ವಲ್ಪ ಹಣವನ್ನು ಕೂಡಿ ಇಟ್ಟುಕೊಂಡಿದ್ದ ಅದನ್ನೇ ತೆಗೆದುಕೊಂಡು ಊರಿಗೆ ಹೋಗುತ್ತಾನೆ ಅಲ್ಲಿ ಅವಳನ್ನು ಬಿಟ್ಟುಹೋದ ಊರು ಅವಳ ಮನೆ ಸ್ವಲ್ಪ ರಿಪೇರಿ ಮಾಡಿದ್ದಾರೆ ಎಲ್ಲವೂ ಸ್ವಲ್ಪ ಬದಲಾವಣೆಯಾಗಿತ್ತು.

ಅಲ್ಲಿದ್ದ ಒಬ್ಬ ಊರಿನ ಅಜ್ಜಿ ಕರಿಬಸವನನ್ನು ನೋಡಿ ನಿನ್ನ ಹೆಂಡತಿ ಮಗಳನ್ನು ನೋಡೋದಿಕ್ಕೆ ಈಗ ಬಂದ ಇದ್ದಾಗಂತು ಬಂದಿಲ್ಲ. ಈಗ ಸತ್ತಮೇಲಾದ್ರು ಬಂದಿದ್ದೀಯಲ್ಲ. ನಿನ್ನ ಬಗ್ಗೆ ತಿಳದುಕೊಂಡು ಅವರು ನಿನ್ನನ್ನು ನೋಡುವುದಕ್ಕೆ ಹೊರಟರು. ಹಾಗೆಯೇ ಮಗಳ ಮದುವೆಯ ವಿಷಯವನ್ನು ತಿಳಿಸಲು ರಾತ್ರಿ ಹೊರಟರು ಆದರೆ ಹೈವೆ ಹತ್ರ ಆಕ್ಸಿಡೆಂಟ್ ಆಗಿ ಸತ್ತು ಹೋದ್ರು. ಹೋಗಿ ಆ ಎರಡು ಮುಖವನ್ನು ನೋಡು ಎಂದು ಹೇಳಿದಳು. "ಕರಿಬಸಪ್ಪನ ಮುಖ ಬೆವೆತಿತ್ತು. ದೇವರು ಎಂತಹ ಶಿಕ್ಷೆ ಕೊಟ್ಟನಲ್ಲ. ಈ ಶಿಕ್ಷೆಗಿಂತ ನನ್ನ ಹೆಂಡತಿ-ಮಗಳು ಎಂತಹ ನೋವಿನ ಭಾರವನ್ನು ನನ್ನ ಮೇಲೆ ಹೊರಿಸಿ

ಹೋಗಿಬಿಟ್ಟರಲ್ಲ...! ಬೇಡ ಈ ಜೀವನ, ಅವಳ ನೋವಿನ ಭಾರವ ನಾನು ಹೊರಲಾರೆ... ಅಂದು ಅದೇ ಅಜ್ಞಾನದ ಕ್ಷಣಕತ್ತಲು ನನ್ನ ಜೀವನವನ್ನೇ ಹಾಳು ಮಾಡಿತು. ಇಂದು ದೇವರು ಬೇಕು ಅಂತಲೇ ಕ್ಷಣ ಕತ್ತಲೆಯನ್ನೊಡ್ಡಿ ದೊಡ್ಡ ಏಟನ್ನೇ ಕೊಟ್ಟುಬಿಟ್ಟಿದ್ದಾನೆ. ಕರಿಬಸಪ್ಪ ಸ್ಮಶಾನದ ಕಡೆ ಮುಖ ಮಾಡದೆ ಹಾಗೆ ಬಂದುಬಿಟ್ಟ."

ಕ್ಷಣ ಕತ್ತಲೆಯಲ್ಲಿ ಭಯದ ನಡುವೆ ಹೆಂಡತಿಯ ಆಂತರ್ಯದ ನೋವನ್ನೇ ಹುಡುಕುತ್ತಾ ಹೊರಟಿದ್ದ.

ನಂತರ ಜಾಗತಿಕರಣ ಮಧ್ಯಮ ವರ್ಗದ ಜನರ ಪರಿಸ್ಥಿತಿಯನ್ನೇ ಇನ್ನೊಂದು ಕಥೆ ಹೇಳುತ್ತಾ ಸಾಗುತ್ತದೆ.

ಕಾಮರಾಜನ ವಿಂಡೋಶಾಪಿಂಗ್ ಕಥೆಯು ಬದುಕು ಮತ್ತು ಕಾಮದ ಆಸೆ ಎರಡರ ಮಧ್ಯೆ ನಡೆಯುವ ಒಂದು ಸಂಘರ್ಷ ಇದು ಜೀವನ ಎಷ್ಟು ಮುಖ್ಯವಾಗಿರುತ್ತದೆಯೋ ಅಷ್ಟೆ ವಯಸ್ಸಿನ ಆಸೆ ಆಕಾಂಕ್ಷೆಗಳು. ನಾವು ಬೆಳೆದಂತೆಯೇ ಅದು ದೊಡ್ಡ ಆಲದ ಮರವಾಗಿ ಬೆಳೆಯುತ್ತದೆ. ಮಧ್ಯಮ ವರ್ಗದ ಜನರಿಗೆ ಅವರ ಬದುಕನ್ನು ಕಟ್ಟಿಕೊಳ್ಳುವುದು ಬಹಳ ಮುಖ್ಯ ಅಷ್ಟೆ ಕಷ್ಟಕರದ ಜೀವನ ಇದರ ಮಧ್ಯೆ ವಯಸ್ಸು ಬೆಳದಂತೆ ಕಾಮ ನಮ್ಮ ದೇಹವನ್ನು ಪ್ರವೇಶ ಮಾಡುತ್ತದೆ. ಅದು ಒಂದು ಮಿತಿಯಲ್ಲಿ ಇರಬೇಕು. ಇಲ್ಲದಿದ್ದರೆ ಬದುಕು ಮತ್ತು ಕಾಮದ ನಡುವೆ ಸಂಘರ್ಷ ನಡೆಯುವುದು. ಸಾಮಾನ್ಯ ಈ ರೀತಿಯ ಸಂಘರ್ಷದಿಂದ ಮನಸ್ಸಿನಲ್ಲಿ ದಂದ್ವಕ್ಕೆ ಸಿಕ್ಕಿಕೊಳ್ಳುತ್ತವೆ. ಆದ್ದರಿಂದ ಹೊರಗೆ ಒಂದು ಜೀವನ ಕಟ್ಟಬೇಕು.

ಈ ಸಮಾಜ ಬೆಳೆದಂತೆ ನಮ್ಮ ಬದುಕಿನ ಚಿತ್ರಣವೇ ಬೇರೆಯಾಗುತ್ತ ಬರುತ್ತದೆ. ಈ ಸಮಾಜದಲ್ಲಿ ಬದುಕು ಬೇಕು ಎಂದರೆ ನಮಗೆ ನಮ್ಮದೆ ಆದ ಸ್ಥಾನಮಾನಬೇಕು. ಈ ಸ್ಥಾನಮಾನಗಳಿಸಬೇಕು ಎಂದರೆ ಹಣಬೇಕು. ಆ ಹಣವನ್ನು ಸಂಪಾದಿಸಬೇಕು ಎಂದರೆ ನಾವು ತುಂಬಾ ಕಷ್ಟಪಟ್ಟು ದುಡಿಯಬೇಕು. ನಾವು ಒಂದು ಗುರಿಯನ್ನು ಇಟ್ಟುಕೊಳ್ಳಲೇಬೇಕು. ಈ ಗುರಿಯನ್ನು ಮುಟ್ಟಬೇಕು ಎಂದರೆ ನಾವು ಏಕಾಗ್ರತೆಯಿಂದಲೇ ಇರಬೇಕು. ಗುರಿಯನ್ನು ತಲುಪುವಾಗ ಅನೇಕ ಅಡ್ಡಿ ಆತಂಕಗಳು ಬರುತ್ತವೆ. ಇದನ್ನೆಲ್ಲಾ ಮೀರಿ ಜೀವನದಲ್ಲಿ ಶ್ರೇಷ್ಠ ವ್ಯಕ್ತಿತ್ವವನ್ನು ಸಾಧಿಸುವುದು ನಿಜವಾದ ದೊಡ್ಡ ಸಾಧನೆ.

ಕಾಮರಾಜನ ವಿಂಡೋಶಾಪಿಂಗ್ ಕಥೆಯಲ್ಲಿ ಹೆಣ್ಣಿನ ಮೋಹ ಗಂಡಿನ ದೌರ್ಬಲ್ಯದ ನಡುವೆ ನಡೆಯುವ ಸಂಘರ್ಷ ಆ ಯುದ್ಧದ ನಡುವೆ ಯಾವ ಆಯ್ಕೆ ಎಂಬುದು ಈ ಕಥೆ ಹೇಳುತ್ತಾ ಸಾಗಿದೆ. ಕತ್ತಲೆಯಲ್ಲಿ ಎಂತಹ ಹೆಣ್ಣಾದರೂ ಅವಳು ಹೇಗಿದ್ದರೂ ಕಪ್ಪಗಿದ್ದರೂ ದಪ್ಪವಾಗಿದ್ದರೂ, ಎಂತಹ ಹೆಣ್ಣಾದರೂ ಸುಂದರಿಯರೇ. ಬೆಳಕಿನಲ್ಲಿ ಅವರ ಸೌಂದರ್ಯವನ್ನು ನೋಡಿ ಕತ್ತಲೆಯಲ್ಲಿ ಅದರ ಸೊಬಗನ್ನು ಅನುಭವಿಸುವ ದೇಹ ಮನಸ್ಸಿನ ಆಸೆ ಕಾಮನೆಗಳು ಎಂದೂ ಮುಗಿಯದು ಮನಸ್ಸಿನ ಕಾಮನೆಗಳನ್ನೇ ಬಚ್ಚಿಡುವುದು ಅಷ್ಟೊಂದು ಸುಲಭವಲ್ಲ ಅದು ತುಂಬಾ ಕಷ್ಟ ಬೆಂಕಿಯನ್ನು ಸೆರಗಿನಲ್ಲಿ ಕಟ್ಟಿಕೊಂಡ ಹಾಗೇ. ರಾಜಾರಾಮನಿಗೆ ಮದುವೆಯ ವಯಸ್ಸು ಮುಗಿಯುತ್ತ ಬರುತ್ತಿದ್ದರೂ. ನನಗೆ ಒಳ್ಳೆಯ ಕೆಲಸವಿಲ್ಲ ಎಲ್ಲೂ

ಖಾಯಂ ಆದ ಮನೆಯಿಲ್ಲ ವಯಸ್ಸು 30 ಆಗುತ್ತಾ ಬರುತ್ತಿದೆ. ಇದು ಅವನನ್ನು ಕಾಡುತ್ತಿತ್ತು. ರಾಜಾರಾಮನಿಗೆ ಸಂಬಂಧಿಕರ ಮಾತುಗಳಿಂದ ಮದುವೆಯ ಯೋಚನೆ ಬಿಟ್ಟು ಬಿಡಬೇಕು ಎನ್ನುವಷ್ಟರ ಬಗ್ಗೆ ಜುಗುಪ್ಸೆ. ಇವನ ಸಂಬಳಕ್ಕೆ ಯಾರು ಹೆಣ್ಣು ಕೊಡುತ್ತಿರಲಿಲ್ಲ. ನಿನಗೆ ಇನ್ನು ಹೆಣ್ಣು ಸಿಗುವುದಿಲ್ಲ. ಈ ರೀತಿಯ ಮಾತುಗಳು ಬಹಳ ಬೇಸರ ಉಂಟು ಮಾಡಿತ್ತು. ಆದರೆ ಮದುವೆ ಬೇಡವೆಂದರೆ ನನ್ನ ದೇಹ ಮಾತ್ರ ತೃಷೆಯ ಕಾಮರಾಜ ಮಾತ್ರ ನೀನು ನನ್ನನ್ನು ಕೈ ಬಿಡಬೇಡ ನನ್ನ ಆಸೆಗಳನ್ನು ತೀರಿಸದೆ ಹೋದರೆ ನಾನು ಸುಮ್ಮನಿರುವುದಿಲ್ಲ ಎಂದು ಹೇಳುತ್ತಿತ್ತು.

ರಾಜಾರಾಮ ಒಬ್ಬ ಸುಂದರ ವ್ಯಕ್ತಿ, ಅವನ ವಯಸ್ಸು ಆದಂತೆ ಎಲ್ಲಿ ತನ್ನ ದೇಹಕ್ಕೆ ಶಕ್ತಿ ಕಡಿಮೆಯಾಗಬಹುದು ಎಂಬ ಆತಂಕ. ಅವನ ಮನಸ್ಸು ನೀನು ವಿಂಡೋ ಶಾಪಿಂಗ್ ಮಾಡೋದೆ ಆಯ್ತು. ಹೆಣ್ಣುಗಳನ್ನು ನೋಡುತ್ತಾ ಎಷ್ಟು ದಿನ ಖುಷಿ ಪಡುತ್ತೀಯಾ. ಇಲ್ಲ ಮದುವೆಯಾಗು ಇಲ್ಲ ಯಾವುದಾದರೂ ಸುಂದರಿ ಹತ್ತಿರ ಕರೆದುಕೊಂಡು ಹೋಗು, ಕಾಮರಾಜ ಪ್ರತಿನಿತ್ಯ ಬೇಡುತ್ತಿದ್ದ. ರಾಜರಾಮ ಈ ರೀತಿಯ ಅತಂತ್ರ ಸ್ಥಿತಿಯಲ್ಲಿ ಇದನ್ನೇ ರಾಜರಾಮನಿಗೆ ಮದುವೆಯಾಗಿ ಬಿಡಲೇ. ಮದುವೆಯಾದರೆ ಕಾಮರಾಜ ಬಿಟ್ಟುಹೋಗುತ್ತಾನೆ ಅವನ ತೊಂದರೆ ಇರುವುದಿಲ್ಲ. ಆದರೆ ರಾಜರಾಮನಿಗೆ ಇನ್ನೊಂದು ರೀತಿಯ ಯೋಚನೆ ಮದುವೆಯಾದರೆ ಜೀವನ ನಡೆಸಿಕೊಂಡು ಹೋಗುವುದು ತುಂಬಾ ಕಷ್ಟ. ಈಗಿನ ಹೆಣ್ಣು ಮಕ್ಕಳಿಗೆ ಆಸೆ ಜಾಸ್ತಿ. ಅದು ಬೇಕು ಇದು ಬೇಕು ಎಂದು ಕೇಳುತ್ತಾರೆ. ಅದನ್ನೆಲ್ಲ ಕೂಡಿಸಬೇಕು ಎಂದರೆ ಸಂಬಳ ಜಾಸ್ತಿಬೇಕು. ಕೇವಲ ಸಂಭೋಗಕ್ಕೆ ಮಾತ್ರ ಎಂದುಕೊಳ್ಳುವುದಿಲ್ಲವೆ ಅವಳ ಆಸೆ ಆಕಾಂಕ್ಷೆಗಳನ್ನು ಈಡೇರಿಸದೇ ಹೋದರೆ ಅವಳು ಕೆಲಸದ ನೆಪದಲ್ಲಿ ಇನ್ನೊಬ್ಬರ ಸಂಗ ಮಾಡಬಹುದು ನಮ್ಮ ಸಂಸಾರದ ಸಂಬಂಧ ಹಾಳಾಗಬಹುದು.

ಈಗಿನ ಸಮಾಜದಲ್ಲಿ ನೋಡುತ್ತಿದ್ದೇವೆ ಎಂದು ಯೋಚನೆ ಮಾಡ ತೊಡಗಿದ್ದರು ಅವರ ಇವನ ದೇಹದ ಒಳಗೆ ಇದ್ದ ಕಾಮರಾಜನಿಗೆ ಇದ್ದು ಯಾವುದು ಬೇಡ ಅವನಿಗೆ ಅವನ ಕಾಮವನ್ನು ಈಡೇರಿಸಿಕೊಳ್ಳುವುದು ಮುಖ್ಯ ಜೊತೆಗೆ ರಾಜ ರಾಮ ಈ ರೀತಿಯ ಯೋಜನೆ ಮಾಡುತ್ತಿದ್ದರೆ ಕಾಮರಾಜನಿಗೆ ಕೋಪ.

ಕಾಮರಾಜ ದೇವರ ಹತ್ತಿರ ಕೆಲಸ, ಮನೆ, ಮದುವೆ, ಎಲ್ಲವೂ ಬೇಗವಾಗಲಿ ಎಂದು ಬೇಡಿಕೊಳ್ಳುತ್ತಿದ್ದ.

ರಾಜರಾಮನಿಗೆ ಮದುವೆ ವಯಸ್ಸು ಮೀರುತ್ತ ಹೋಗುತ್ತಿದೆ ದೇಹದ ಕಣ್ಣುಗಳು ತನ್ನ ಜೊತೆ ಕೆಲಸ ಮಾಡುತ್ತಿರುವವರ ಮೇಲೆ ಮದುವೆಯಾದ ಹೆಂಗಸ ಮೇಲೆ ಹೋಗುತ್ತಿತ್ತು. ರಾಜರಾಮನಿಗೆ ಹುಡುಗಿಯರನ್ನು ಕದ್ದು ಮುಚ್ಚಿ ನೋಡುವುದು ತಪ್ಪು ' ಎಂದೆನಿಸಿದ್ದರೂ ಇನ್ನೊಮ್ಮೆ ಒಂದು ಬಾರಿಯಾದರೂ ಒಳಗಿನ ಆಸೆಯನ್ನೇ ಈಡೇರಿಸಿಬಿಡಲೇ ಎನ್ನುವ ತವಕವೂ ಜೊತೆಯಲ್ಲಿತ್ತು.

ರಾಜರಾಮಗೆ ಬದುಕಿನ ಆದರ್ಶಗಳನ್ನು ನಂಬಿಕೊಂಡು ಜೀವನ ಸಾಗಿಸಲೇ? ಇಲ್ಲವೆ ಒಳಗಿನ ಅರಿಷಡ್ವರ್ಗಗಳ ಅಂಧಃ ಸತ್ವಗಳ ಹಸಿವನ್ನು ಆಗಾಗ ಸಂತೃಸುತ್ತಾ ಇನ್ನೊಂದು ರೀತಿಯಲ್ಲಿ ಬದುಕಲೇ? ಇವುಗಳಲ್ಲಿ ಯಾವುದು ನಿಜವಾದ ಬದುಕು ಎಂದು ಅವರಿಗೆ ತನ್ನಲ್ಲಿ ಇದ್ದು ಕಾಮರಾಜನನ್ನು ಎದುರಿಸುವ ಧೈರ್ಯವಿಲ್ಲದೆ ಮನಸ್ಸು ಕುಗ್ಗಿತ್ತು.

[4]'ಏನು ಮಾಡುವುದು... ನನ್ನೊಳಗಿನ ಈ ಕಾಮರಾಜನನ್ನು ನಾನು ಕೊಲ್ಲಲೇಬೇಕು.. ಇಲ್ಲವಾದರೆ ನಾನು ಈ ರೀತಿ ಬರೀ ಕಾಮರಾಜನ ಆಸೆಗಳನ್ನು ರೀತಿಯ ಬದುಕು ಮಣ್ಣ ಸೇರುತ್ತದೆ. ಅವನು ನನ್ನಲ್ಲಿ ಇಲ್ಲವಾದರೂ ಪರವಾಗಿಲ್ಲ. ನಿಧಾನವಾಗಿ ಕರಗಿ ಸತ್ತುಹೋದರು ಚಿಂತಿಯಿಲ್ಲ. ನಾನು ಅಂದುಕೊಂಡ ದೇಹಕ್ಕೆ ಬೇಕಾಗಿರುವುದ ಅಂತಹ ಮುಖವಲ್ಲ..!' ರಾಜಾರಾಮನಿಗೆ ಬುದ್ಧಿಯ ಈ ಯೋಚನೆ ಎಲ್ಲೋ ಒಂದು ಕಡೆ ಸರಿ ಅನ್ನಿಸಿತು.

ಕಾಮರಾಜ ಅಷ್ಟು ಬೇಗ ಸುಲಭವಾಗಿ ಸಾಯುವುದಿಲ್ಲ ಅವನು ವ್ಯಾಘ್ರನಂತೆ ಎದೆ ಮಟ್ಟದವರೆಗೆ ಮಗನಂತೆ ಬೆಳೆದು ಬಿಟ್ಟಿದ್ದ ಅದನ್ನು ಓಡಿಸುವುದು ತುಂಬಾ ಕಷ್ಟ ಇದನ್ನೇ ಹೀಗೆ ಬಿಟ್ಟರೆ ಎಲ್ಲರನ್ನು ಕದ್ದು ಮುಚ್ಚಿ ನೋಡುತ್ತದೆ. ಕಾಲ ಕಳೆದ ಜೀವನವನ್ನೇ ಹಾಳು ಮಾಡಬೇಕಾಗುತ್ತದೆ. ಮದುವೆಯಾದ ಮೇಲೆಯೂ ಕೈ ಹಿಡಿದ ಹೆಂಡತಿಗೆ ನಿಯತ್ತಾಗಿ ಇರುತ್ತೇನೆ ಎಂಬುದು ನಂಬಿಕೆ ಇಲ್ಲ ಬೇರೆ ಹುಡುಗಿಯರ ಸುತ್ತ ಈತನ ಚಿತ್ತ ಅವಗಾಹನೆ ಇರುತ್ತದೆ. ಹೀಗೆ ಯೋಚನೆ ಮಾಡುತ್ತಾ ರಾಜ ರಾಮನಿಗೆ ತನ್ನ ಮನಸ್ಸಿನ ಹೋರಾಟಕ್ಕೆ ಅಂತಿಮವಾಗಿ ಒಂದು ನಿರ್ಧಾರ ತೆಗೆದುಕೊಳ್ಳುತ್ತಾನೆ.

ಜೀವನದಲ್ಲಿ ಶ್ರೇಷ್ಠ ವ್ಯಕ್ತಿತ್ವವನ್ನೇ ಸಾಧಿಸುವುದೇ ನಿಜವಾದ ದೊಡ್ಡ ಸಾಧನೆ ಬೇರೆಯವರು ಗುರುತಿಸುತ್ತಿದ್ದರೂ ತನ್ನ ಒಳಗಿನ ವ್ಯಕ್ತಿತ್ವಕ್ಕೆ ಭಾವನೆ ಬಂದರೆ ಸಾಕು ಎನ್ನುವುದು ಧೈರ್ಯ. ಒಳಗಿನ ಕಾಮರಾಜನನ್ನು ಸೋಲಿಸಿ ಜೀವನ ಮೊದಲು ಮುಖ್ಯ. ಈ ರೀತಿಯಲ್ಲಿ ಮನಸ್ಸಿನಲ್ಲಿ ನಡೆಯುವ ದಂದ್ವಗಳಿಗೆ ಪರಿಹಾರ ಕಂಡುಕೊಳ್ಳುತ್ತಾ ಜೀವನ ಬದುಕು ಮುಂದುವರಿಸುತ್ತಾನೆ.

ಆಲ್ಬರ್ಟ್ ಪಿಂಟೋ, ಇದು ಇನ್ನೊಂದು ರೀತಿಯ ಬದುಕಿನ ಚಿತ್ರವನ್ನೇ ತೋರಿಸುವ ಅನುಭವವನ್ನೇ ಈ ಕಥೆ. ಮನುಷ್ಯನ ಸಂಬಂಧಗಳ ಟೊಳ್ಳು-ಗಟ್ಟಿತನ ಸ್ವಾರ್ಥ, ಅಸಹಾಯಕತೆ ಅದಿಮ ಭಾವನೆಗಳನ್ನು ಶೋಧಿಸುತ್ತದೆ. ಮನುಷ್ಯ ತಲುಪಬಹುದಾದ ಸ್ವಾರ್ಥದ ಕಥೆಯು ಪರಿಣಾಮಕಾರಿಯಾಗಿ ತೋರಿಸುತ್ತದೆ. ನಿಷ್ಕಲ್ಮಶವಾದ ಮುಗ್ಧತೆ & ಸರಳತೆಯನ್ನು ಹೊಂದಿರುವ ಬದುಕು, ಸಂಬಂಧಗಳನ್ನು ಹುಡುಕುತ್ತ ಹೊರಟಿರುವುದು ಕಾಣುತ್ತದೆ.

[5]"ಸತ್ತ ಮೇಲೆ ಎಲ್ಲವನ್ನೂ ಇದ್ದಷ್ಟು ಹೊತ್ಕೊಂಡಾ ಹೋಗ್ತೀವಿ... ಸತ್ರೆ, ಸಾಯೋ ಕಾಲ್ದಲ್ಲಿ ಹೆಣ ಹೊರಾಕೆ ನಾಲ್ಕು ಜನನಾದ್ರೂ ಬಂದು ಸೇರ್ತಾರೆ".

ಹೀಗೆ ಜೀವನದ ಎಳೆಯಲ್ಲಿ ಬರುವ ಒಂದೊಂದು ಎಳೆಯನ್ನು ಬಿಚ್ಚಿಡುತ್ತಾ ಹೋಗಿದೆ ಆಲ್ಬರ್ಟ್ ಪಿಂಟೋ ಅವನ ಜಿಪುಣತನ ಯಾರಿಗೂ ಸಹಾಯ ಮಾಡದ ಬುದ್ಧಿ ಇದೆಲ್ಲವು ಜನರಲ್ಲಿ ಇವನೊಬ್ಬ ಸ್ವಾರ್ಥಿ ಇವನಿಗೆ ಯಾರಿಗಾದರೂ ಸಹಾಯ ಮಾಡಿದಿದ್ದರೆ ಇವನು ಸಾಯುವ ಸಮಯದಲ್ಲಿ ಯಾರೂ ಸಹ ಸಹಾಯ ಮಾಡುವುದಿಲ್ಲ. ಈ ರೀತಿಯ ಮಾತುಗಳನ್ನು ಕೇಳಿ ಬೇಸರಗೊಂಡು ತಮಗೆ ತಾವೇ ಆತ್ಮಸ್ಥೈರ್ಯ ಸಮಾಧಾನ ಮಾಡಿಕೊಳ್ಳುತ್ತಿದ್ದರು. ಮಕ್ಕಳಿಲ್ಲದೆ ಒಂಟಿಯಾಗಿ ಭೂತ ಬಂಗಲೆಯಂತಹ ಮನೆಯಿದ್ದು 85 ವರ್ಷದ ಪಿಂಟೋಗೆ ಸಾವಿರಾರು ಕೋಟಿ ಬೆಲೆ ಆಸ್ತಿ ಪಿಂಟೋಗೆ ಇಷ್ಟು ಆಸ್ತಿ ಇದ್ದರೆ ಅವನು ಸತ್ತ ಮೇಲೆ ಅನ್ಯಾಯವಾಗಿ ಬೇರೆಯವರಿಗೆ ಸೇರುತ್ತದೆ ಅಲ್ಲ ಎಂಬ ಯೋಚನೆ ಅವನಲ್ಲಿ ಕಾಡುತ್ತಿತ್ತು.

ಪಿಂಟೋವಿನ ಮನೆ ನಗರದ ಪ್ರತಿಷ್ಠಿತ ವೆಲ್ಲಿಂಗ್‌ಟನ್ ರಸ್ತೆಯಲ್ಲಿ 100 ಅಳತೆ ಉದ್ದ 200 ಅಗಲವಿದ್ದು, ಭವ್ಯವಾದ ಕಲ್ಲಿನ ಮನೆಗೆ ಆಗಲೇ ಸುಮಾರು 60 ವರ್ಷವಾಯಿತ್ತು. ಅಪ್ಪಟ ಬ್ರಿಟಿಷ್ ವಾಸ್ತು ಶೈಲಿಯಲ್ಲಿ ಕಟ್ಟಿದ್ದ. ಪಿಂಟೋವಿನ ಮನೆಯನ್ನು ಯಾರಾದರೂ ಕೇಳಿದರೆ ತೋರಿಸುತ್ತಿದ್ದರು. ಒಂದು ದಿನ ಆರೋಗ್ಯ ಸರಿಯಿಲ್ಲದೆ ಪಿಂಟೋ ಆರೋಗ್ಯ ಸರಿಯಿಲ್ಲದೆ ಹಾಸಿಗೆ ಹಿಡಿಯುತ್ತಾನೆ. ಅವನಿಗೆ ಭಯ ಪ್ರಾರಂಭವಾಗುತ್ತದೆ. ನಾನು ಸತ್ತಮೇಲೆ ನನ್ನ ಆಸ್ತಿಯನ್ನು ಯಾರಿಗೆ ಕೊಡುವುದು ಅನಾಥಶ್ರಮ, ಮಠಕ್ಕೆ ಕೊಟ್ಟರೆ ಅವರು ಸರಿಯಾಗಿ ಉಪಯೋಗಿಸುವುದಿಲ್ಲ ಜೊತೆಗೆ ಇವನಿಗೆ ಯಾರ ಮೇಲೆ ನಂಬಿಕೆಯು ಇಲ್ಲ ಜನರಿಗೆ ಹಣದ ಅಭಾವ ಅಧಿಕವಾಗಿದೆ ಅವರ ಆಕಾಂಕ್ಷೆಗಳು ಹೆಚ್ಚು ಈ ರೀತಿ ಇರುವವರಿಗೆ ಆಸ್ತಿ ಅಂತಸ್ತಿನ ಮೇಲೆ ಅಧಿಕವಾಗಿ ವ್ಯಾಮೋಹ ಎಲ್ಲರೂ ಭ್ರಷ್ಟರು ಅದಕ್ಕೆ ಯಾರನ್ನು ನಂಬಲು ಅರ್ಹರಲ್ಲ. ತಾನು ದುಡಿದಿದ್ದನ್ನೆಲ್ಲ ಬೇರೆಯವರಿಗೆ ಕೊಡುವುದಕ್ಕೆ ಇಷ್ಟವಿಲ್ಲ. ಏನು ಮಾಡುವುದು ಇವನ ಪ್ರಶ್ನೆಯಾಯಿತು. ಈ ರೀತಿಯ ಚಿಂತೆಯಲ್ಲಿ ನನ್ನ ಏಸುವಿನ ಹತ್ತಿರ ಹೋಗಿ ಈ ರೀತಿಯ ಕೆಟ್ಟ ಕನಸು ಕಾಡುತ್ತಿದೆ.

ಇದಕ್ಕೆ ನೀನೆ ಪರಿಹಾರ ಕೊಡಬೇಕು ಎಂದು ಕೇಳಿಕೊಳ್ಳುತ್ತಾನೆ. ಇದೇ ಸಮಯದಲ್ಲಿ ಕುಂಬೇರ ಕುಲದವರು ರಾಜಯತಿ ಕೃಷ್ಣರಾಯರ ವಂಶಸ್ಥರಿಗೆ ಸೇರಿದ್ದ ಸುಮಾರು 500 ವರ್ಷಗಳ ಹಳೆಯದಾದ ರತ್ನದ ಹಾರ, ವಜ್ರ ಖಚಿತ, ಮುತ್ತುರತ್ನಗಳ ಕವಚವು ಹರಾಜಿಗೆ ಇದ್ದಿದ್ದು ಗೊತ್ತಾಗಿತ್ತು. ಈ ವಜ್ರದ ಹಾರಕ್ಕೆ ಬೆಲೆ ಕಟ್ಟಲಾಗದಷ್ಟು ಮೌಲ್ಯವಿದೆ. ಈ ಹಾರವನ್ನು ಹರಾಜಿಗೆ ಸರ್ಕಾರವು ಇಟ್ಟಿತು. ಇದನ್ನು ತೆಗೆದುಕೊಳ್ಳಲು ಪ್ರಪಂಚದ ದೊಡ್ಡ ದೊಡ್ಡ ವ್ಯಕ್ತಿಗಳು ಬಂದಿದ್ದರು. ರತ್ನದ ಹಾರದ ಭದ್ರತೆಯನ್ನು ವಹಿಸಿಕೊಂಡಿದ್ದ ದೇಹಲಿಯ ಮೂಲದ ಹೆಸರಾಂತ ಕಂಪನಿ ಭಾರೀ ಭದ್ರತೆಯೊಂದಿಗೆ ರಾಜ ಯತಿಕೃಷ್ಣರಾಯನ ರತ್ನದ ಹಾರವನ್ನು ನಗರದ ಪ್ರತಿಷ್ಠಿತ ಸೆವನ್ ಸ್ಟಾರ್ ಹೊಟೇಲ್ ರಾಯಲ್‌ಲ್ಯಾಂಡ್ ಮಾರ್ಕ್ ಹೊಟೇಲಿನ ಬ್ಯಾಂಕ್ವೇಟ್‌ಗೆ ತಂದಿದ್ದರು. ದೇಶ ದೇಶದಿಂದ ಬಂದವರು ಹರಾಜಿನಲ್ಲಿ ಪಾಲ್ಗೊಂಡರು. ಹರಾಜು ಪ್ರಾರಂಭವಾದಾಗ 800 ಕೋಟಿಯಿಂದ ಪ್ರಾರಂಭವಾಯಿತು. ಪ್ರತಿಯೊಬ್ಬರು ಹರಾಜನ್ನು ಕೂಗುತ್ತಾ ಕೊನೆಯಲ್ಲಿ 1500 ಕೋಟಿಗೆ ಪಿಂಟೋ ಅವರು ಖರೀದಿಸಿದರು ಅಲ್ಲಿಗೆ ಈ ಹರಾಜು ಪ್ರಕ್ರಿಯೆ ಕೊನೆಗೊಂಡಿತು.

ಅಲ್ಲಿಗೆ ಬಂದವರೆಲ್ಲ ಶ್ರೀಮಂತ ವೃದ್ಧನ ಅಂತಃಶಕ್ತಿಯನ್ನು ಮೆಚ್ಚಿ ಅಭಿನಂದಿಸಿದರು. ಇಷ್ಟು ದಿನದವರೆಗೆ ಸಂಪಾದಿಸಿದ ಆಸ್ತಿಯನ್ನೆಲ್ಲ ಫ್ಯಾಕ್ಟರಿಗಳು, ವಾಣಿಜ್ಯ ಸಂಕೀರ್ಣ, ಬೆಲೆ ಬಾಳುವ ಕಂಪನಿಗಳ ಷೇರುಗಳಲ್ಲೆ ರಾಜ ಯತಿಕೃಷ್ಣನ ಪಾಲಾಗಿದ್ದವು. ಪಿಂಟೋವಿಗೆ ಮನಸ್ಸಿನಲ್ಲಿದ ತನ್ನ ಸಂಪೂರ್ಣ ಆಸ್ತಿಯ ಭವಿಷ್ಯದ ಚಿಂತೆ ಹೀಗೆ ದೂರವಾಯಿತು. ತನ್ನ ಮನೆಯ ಕೆಲಸದವನಾದ ರಂಗೇಗೌಡನಿಗೆ ತಾನು ಇದ್ದ ಮನೆಯನ್ನು ಬಿಟ್ಟು ತನ್ನ ಕೊನೆಯ ಆಸೆಯನ್ನು ಹೇಳುತ್ತಾನೆ. ತಾನು ಸತ್ತ ನಂತರ ರತ್ನದ ಹಾರ ನನ್ನೊಂದಿಗೆ ಮಣ್ಣಾಗಬೇಕು. ಈ ಸತ್ಯ ನಿನ್ನನ್ನು ಬಿಟ್ಟು ಹೋಗಬಾರದು. ಈ ಸತ್ಯಕೂಡ ಕೂಡ ನಿನ್ನಲ್ಲೆ ಸಾಯಬೇಕು. ನನ್ನ ಆಸ್ತಿಗೆ ನೆಮ್ಮದಿಯ ಶಾಂತಿಬೇಕು. ಆ ಶಾಂತಿ ನೆಮ್ಮದಿ ಮಣ್ಣಿನಲ್ಲೇ ನನಗೆ ಸಿಗಲಿ. ಈ ಕೆಲಸವನ್ನು ನೀನು ಮಾಡುತ್ತೀಯ ಎಂದು ಕೊನೆಗೊಳಿಸಿದ್ದಾರೆ.

ಪಿಂಟೋ ಅವರಿಗೆ ಕೊನೆಯಲ್ಲಿ ಸಹ ತಮ್ಮ ಆಸ್ತಿಯನ್ನು ಹೊತ್ತುಕೊಂಡು ಹೋದರು. ಪಿಂಟೋ ತನ್ನ ದುರಾಸೆ ತನ್ನ ಆಸ್ತಿಯು ಮಣ್ಣಾದರೂ ಪರವಾಗಿಲ್ಲ ಯಾರಿಗೂ ದಕ್ಕಬಾರದೆಂಬ ಕೀಳು ಮನುಷ್ಯನ ಹುಚ್ಚಾಟವನ್ನು ಕಥೆ ಹೇಳುತ್ತದೆ.

ಹಾಗೇ ಸಮಾಜದಲ್ಲಿ ನಗರೀಕರಣ ಮುಂದುವರೆಯುತ್ತಿದ್ದಂತೆ ಗಂಡು ಹೆಣ್ಣಿನಲ್ಲಿ ಸಂಸ್ಕಾರ ಮರೆತು ಪ್ರೀತಿ ಕೇವಲ ಗಂಡು ಹೆಣ್ಣಿನ ಮಧ್ಯದಲ್ಲಿ ಮಾತ್ರ ಎಂಬುದು ಇದ್ದ ಸಮಾಜದಲ್ಲಿ ಪುಟ ಸಂಸ್ಕಾರ ಕಥೆಯು ಸಲಿಂಗ ಕಾಮಿಗಳ ವಿವಾಹವನ್ನು ಕಾನೂನು ಬದ್ಧವಾಗಿಸಿರುವ ಸಂದರ್ಭದಲ್ಲಿ ಈ ಕಥೆ ಒಳ್ಳೆಯ ಆಲೋಚನೆಯ ಒರೆಗಲ್ಲಿಗೆ ನಮ್ಮನ್ನು ಹಚ್ಚುತ್ತದೆ ಒಂದು ಹೆಣ್ಣಿನ ಮಾನಸಿಕ ಸ್ವತಂತ್ರವನ್ನು ಎತ್ತಿ ಹೇಳುವ ಉತ್ತಮ ಪ್ರಯತ್ನ ಒಬ್ಬ ಬ್ರಾಹ್ಮಣ ಹುಡುಗನ ಪ್ರೀತಿ ತನ್ನ ಮನಸ್ಸಿನಲ್ಲಿ ಆಗುವ ಆಲೋಚನೆ, ಗೊಂದಲ ಸಂಸ್ಕಾರ, ಆಸೆ, ಎರಡರ ಮಧ್ಯೆ ಆಗುವ ಸಂಘರ್ಷ ಜಗತ್ತು ಬದಲಾವಣೆಯ ಕಾಣುತ್ತಿರುವುದು ಕೇವಲ ಗಂಡು ಹೆಣ್ಣು ಎನ್ನುವ ಸಮಾಜವನ್ನು ಬಿಟ್ಟು ಬೇರೆ ಬದುಕಿದ್ದ ಹೆಣ್ಣು-ಹೆಣ್ಣುಗಳ ಪ್ರೀತಿ ಒಂದು ಗಂಡು ಇಲ್ಲದೇ ಬದುಕುತ್ತೇವೆ ಎನ್ನುವ ಹೆಣ್ಣುಗಳ ಶಕ್ತಿ ಮೆಚ್ಚಲೇಬೇಕು ಸಮಾಜದಲ್ಲಿ ಈ ಜಾಗತಿಕರಣದ ಕಾಲದಲ್ಲಿ ಹೇಗೆ ಬೆಳೆಯುತ್ತಿದ್ದೇವೆ ಎಂಬುದನ್ನು ತಿಳಿಸುವ ಕಥೆಯದು ಕೇವಲ ಗಂಡಿಗೆ ಮಾತ್ರ ಆಯ್ಕೆಯ ಸ್ವತಂತ್ರವಿದೆ ಎಂಬ ಸಾಮಾಜಿಕ ಧೋರಣೆಗೆ ವಿರೋಧವಾದ ಆಲೋಚನೆ ಈ ಕಥೆಯಲ್ಲಿ ಸಾಗುತ್ತದೆ.

ಈ ಕಥೆಯ ಪ್ರಾರಂಭವು ಒಂದು ಪ್ರೇಮ ನಿವೇದನೆಯಿಂದ ಸಾಗುತ್ತದೆ ಸುದರ್ಶನ್‌ಗೆ ತನ್ನ ಪ್ರೀತಿಯನ್ನು ಹೇಳಿಕೊಳ್ಳುವುದಕ್ಕೆ ಏನೊ ಒಂದು ಭಯ, ಹಿಂಜರಿಕೆ, ಆ ಹುಡುಗಿಯ ಮೇಲೆ ಬೆಟ್ಟದಷ್ಟು ಪ್ರೀತಿ ಇತ್ತು. ಸುದರ್ಶನ್ ಅವನ ಪ್ರೀತಿಯನ್ನು ಅವಳ ಹತ್ತಿರ ಹೇಳಬೇಕೆಂದು ತುಂಬಾ ಸಾರಿ ಪ್ರಯತ್ನಪಟ್ಟಿದ. ಒಂದು ದಿನ ಅವಳನ್ನು ಮಾತನಾಡಿಸಿ ಸಾಯಂಕಾಲದ ವೇಳೆಗೆ ಸಿಗುವುದಾಗಿ ಕೇಳಿದ. ಅವಳು ಆಯ್ತು ಎಂದಳು. ಆದರೆ ಸುದರ್ಶನ್‌ಗೆ ಸಾಯಂಕಾಲದ ಸಮಯ ಯಾರಾದರೂ ಪರಿಚಯಸ್ಥರು ಸಿಕ್ಕರೆ ನನಗೆ ಅವಮಾನ ಆಗುತ್ತದೆಂದು 6 ಗಂಟೆ ನಂತರ ಸಿಗುವುದಾಗಿ ಹೇಳಿದ. ಅದಕ್ಕೆ ಆ ಹುಡುಗಿಯು ಆಯಿತು ಎಂದಳು. ಧೈರ್ಯವಾಗಿ ಅವಳ ಹತ್ತಿರ ಹೋಗಿ ನಾನು ನಿನ್ನನ್ನು ತುಂಬಾ ಪ್ರೀತಿಸುತ್ತಿದ್ದೇನೆ. ನನ್ನನ್ನು ಮದುವೆಯಾಗುತ್ತಿಯಾ ಅಂದು ಕೇಳಿದ. ಸುದರ್ಶನ ತನ್ನ

ಪ್ರೀತಿಯ ನಿವೇದನೆಯನ್ನು ಬೇಡುವ ಜೊತೆಗೆ ಆಕಸ್ಮಾತ್ ದೇವಿ ಸಮ್ಮತಿಸಿದರೆ ಆಗಾಗ ಮನಸ್ಸಿಗೆ ಬಂದು ಬೇಡುತ್ತಿದ್ದ ಮನ್ಮಥನ ಬಾಯಿಗೂ ಸ್ವಲ್ಪ ಏನಾದರೂ ಸ್ವಲ್ಪ ಹಾಕುವ ಯೋಚನೆಯಿತ್ತು. ಪಾರ್ಕ್‌ನ ಮೂಲೆಯಲ್ಲಿ ಅವರಿಬ್ಬರು ಕುಳಿತುಕೊಂಡು ಇಬ್ಬರು ಒಬ್ಬರಿಗೊಬ್ಬರು ವೈಷ್ಣವಿಗೆ ತನ್ನ ಪ್ರೀತಿಯ ನಿವೇಧನೆಯನ್ನು ಹೇಳುತ್ತಾನೆ.

[6]'ನನ್ನ ಮುಂದೆ ಕುಳಿತ ಈ ಸುಂದರ ಹೂವು, ನನ್ನವಳಾಗಬೇಕೆಂಬ ಆಸೆ ಮೂಡಿದ್ದಕ್ಕೆ ನನಗೆ ಕಾರಣ ಸಿಗಲಿಲ್ಲ. ಅದು ಮೋಹದ ಬಲೆಯೋ ಅಥವಾ ಋಣಾನುಬಂಧದ ಸೆಲೆಯೋ...? ಈ ಹೂವನ್ನು ಇಷ್ಟಪಟ್ಟಿದ್ದೇನೆ. ಇರುವಷ್ಟು ದಿನ ಸುಕೋಮಲೆಯ ಹೂವನ್ನು ಹೊತ್ತು ಮರೆದಾಡುವುದು ನನ್ನ ಕನಸ್ಸು...? ಒಂದು ಕ್ಷಣ ಇವರಿಗೆ ಮನಸ್ಸಿನ ಆಸೆಗಿಂತ ಮೋಹದ ಕೆಟ್ಟ ಆಸೆ ಬರುತ್ತಿತ್ತು. ಪ್ರೀತಿಯ ಪಕ್ವತೆಗಿಂತ ಮೋಹವೇ ಅತಿಯಾಗಿತ್ತು. ಕೊನೆಗೆ ತಮ್ಮ ಪ್ರೀತಿಯ ನಿವೇದನೆಯನ್ನು ಮಾಡಿದ. ನನಗೆ ನಿನ್ನ ಮೇಲೆ ಪ್ರೀತಿ ಇದೆ. ಒಳ್ಳೆ ಭಾವನೆ ಇದೆ. ಆದರೆ ನೀನು ನಿರೀಕ್ಷಿಸುತ್ತಿರುವ ಪ್ರೀತಿಗೂ, ನಾನು ಹೇಳುತ್ತಿರುವ ಪ್ರೀತಿಗೂ ತುಂಬಾ ವ್ಯತ್ಯಾಸವಿದೆ ಅದನ್ನು ನಿನಗೆ ಹೇಳಲು ನಾನು ಕಷ್ಟಪಡುತ್ತಿರುವೆ. ಅಂತಹ ಹೇಳಿದಳು ಅವರಿಗೆ ಸರಿಯಾಗಿ ಅರ್ಥವಾಗಲಿಲ್ಲ. ಯಾಕೋ ಅವರ ಮನಸ್ಸಿಗೆ ಏನೋ ಒಂಥರ ಬೇಸರ ಮುಖ ಚಿಕ್ಕದಾಗಿ ಹೋಯಿತು. ಸುದರ್ಶನ್ ನೀನೊಬ್ಬ ಗಂಡಸು ಒಂದು ಹೆಣ್ಣನ್ನು ನೋಡದರೆ ಮೋಹ, ಸೆಕ್ಸ್, ಮನಸ್ಸಿಗೆ ಬರುವುದು ಸಹಜ. ಹಾಗೆಯೇ ಒಳ್ಳೆಯ ಸ್ನೇಹಿತಳಾಗಿ ಸುದರ್ಶನ್‌ಗೆ ಕೆಲವು ಸತ್ಯಗಳನ್ನು ಹೇಳುತ್ತಾಳೆ.

[7]'ನನಗೆ ನಿನ್ನಂತಹ ಸುಂದರ ಹುಡುಗರು ಕಂಡರೂ, ನನ್ನನ್ನು ಮುಟ್ಟಿದರೂ ನನಗೆ ಯಾವುದೇ ಸಹಜ ಭಾವನೆಗಳು ಹುಟ್ಟುವುದಿಲ್ಲ. ಆಸೆ ಮತ್ತು ಕಾಮದ ಮನೋವಿಕಾರತೆಯ ಸೆಕ್ಸ್ ವಿಚಾರಗಳು ಯಾವುದೂ ನನಗೆ ಹುಡುಗರನ್ನು ನೋಡಿದಾಗ ಹೊರಹೊಮ್ಮುತ್ತಿಲ್ಲ. ನಾನು ಸಲಿಂಗಿ, ಲೇಸ್ಬಿಯನ್ ಅಂತ ನಿನ್ನಂತಹ ಆತ್ಮೀಯ ಸ್ನೇಹಿತನ ಹತ್ತಿರ ಹೇಳಿಕೊಳ್ಳಲಿಕ್ಕೆ ನನಗೆ ನಾಚಿಕೆಯಿಲ್ಲ. ಏಕೆಂದರೆ ನೀನು ನಿನ್ನ ಅಂತರಾಳದ ನೋವಿಗೆ ಬೆಲೆಕೊಟ್ಟು ನಿನ್ನೊಳಗಿದ್ದ ಸತ್ಯವನ್ನು ಹೇಳಿದ್ದಿ. ಇಷ್ಟು ದಿನದ ನಮ್ಮ ಸ್ನೇಹವನ್ನು ಮುಂದಿನ ಹಂತಕ್ಕೆ ಒಯ್ಯಲು ನೀನು ತಯಾರಾಗಿದ್ದಿ. ಆದರೆ ನನ್ನೊಳಗಿದ್ದ ಈ ರೀತಿಯ ತೊಂದರೆಯನ್ನು ಮುಚ್ಚಿಟ್ಟುಕೊಂಡು ನಿನ್ನನ್ನು ಮೋಹದ ಅಲೆಯಲ್ಲಿ ಇರುವ ನಿನಗೆ ಭಾವನೆಗಳ ಹುಟ್ಟದೇ ಸತ್ತ ಹೆಣವಾಗಿರುವ ನಾನು ನಿನ್ನ ಪ್ರೀತಿಯ ಸಂಬಂಧಕ್ಕೆ ಪ್ರತಿಸ್ಪಂದಿಸದೇ ಇದ್ದರೆ ನಿನ್ನ ಜೀವನ ಸರಿಯಾಗಿ ಸಾಗುವುದೇ? ನಾನು ನಿನಗೆ ಮೋಸ ಮಾಡಿದಂತಾಗುವುದಿಲ್ಲವೇ? ಆಸೆ, ಮೋಹ, ಸಂಭೋಗ, ಮಕ್ಕಳು, ಬದುಕು ಎಲ್ಲವನ್ನು ಅನುಭವಿಸದೇ ಜೀವನವನ್ನು ಹಾಗೆ ಕಳೆಯಲಿಕ್ಕೆ ಸಾಧ್ಯವೇ? ಮುಂದಿನ ಜೀವನದ ಬಗ್ಗೆ ಅಪಾರ ಕನಸುಗಳನ್ನು ಕಂಡಿರುವ ನನಗೆ ನಿನ್ನ ಪ್ರೀತಿಯನ್ನು ಒಪ್ಪಿಕೊಂಡು ಮೋಸ ಮಾಡಿದಂತಾಗುವುದಿಲ್ಲವೇ?" ಎಂದಾಗ್ಯೂ ಒಂದು ಕ್ಷಣ ಇವರಿಗೆ ಆತಂಕವಾಯಿತು. ಅವಳು ಹೇಳುವ ಮುಂದಿನ ದಿನಗಳಲ್ಲಿ ನಮ್ಮಂಥವರಿಗೂ ಸ್ವತಂತ್ರ ಸಿಗುತ್ತದೆ ಎಂಬ ನಂಬಿಕೆಯಲ್ಲಿ ಅಪಾರ ಕನಸು ಸುಂದರ ಬದುಕಿನ ಕಲ್ಪನೆಯನ್ನು ಬಿಟ್ಟಿದ್ದಾಳೆ. ಆ ಕ್ಷಣಕ್ಕೆ ಕೆಲವರಿಗೆ ಕೆಟ್ಟ ಸಂಬಂಧ ಎನಿಸಿದರು ಅವಳ ನಿರ್ಧಾರ ಮಾತ್ರ ಖಚಿತವಾಗಿತ್ತು. ನನ್ನ ನಿನ್ನ

ಸ್ನೇಹ ಹೀಗೆ ಇರಲಿ ನನಗೆ ಒಳ್ಳೆಯ ಸ್ನೇಹಿತನಾಗಿ ನನ್ನ ಜೀವನದುದ್ದಕ್ಕೂ ಬೇಕು. ನಮ್ಮನ್ನು ಒಪ್ಪಿಕೊಳ್ಳುವ ನಿಮ್ಮಂಥ ಮನಸ್ಸುಗಳು ಕನಿಕರ ಹುಟ್ಟುವಂತೆ ಮಾಡುತ್ತಾಳೆ. ಸುದರ್ಶನಿಗೆ ತನ್ನ ಕಂಪನಿಯ ಟೀಮ್ ಲೀಡರ್ ಆದ ಮೋಹನ್ ಅಗರವಾಲ್ ನನೆಪಾದ ನನ್ನನ್ನು ತುಂಬಾ ಇಷ್ಟಪಡುತ್ತಿದ್ದ ಲವ್‌ಯು ಐ ಲೈಕ್ ಯು ಅಂಥ ಎಷ್ಟು ಸಾರಿ ಹೇಳಿದ್ದ. ತನ್ನ ಮನೆಗೂ ಕರೆದ ಈಗ ಗೊತ್ತಾಗಿತ್ತು. ನನಗೆ ಈಗ ಅರ್ಥವಾಯಿತು ಏಕೆ ಎಂದು ತನ್ನ ಕಣ್ಣ ಮುಂದೆ ಬಂದಿತು. ಮನಸ್ಸು ಶೂನ್ಯವಾಯಿತು. ಒಳಗಿದ್ದ ಬುದ್ಧಿಯ ಬ್ರಾಹ್ಮಣ ಮೊದಲು ನೀನು ಸರಿಯಾಗು ಆಗ ಇಡೀ ಜಗತ್ತೇ ನಿನ್ನಂತೆ ಇರುತ್ತದೆ ಎಂದು.

ಜಗತ್ತು ಬದಲಾದಂತೆ ಸಮಾಜದ ವ್ಯಕ್ತಿಗಳಲ್ಲಿ ಬದಲಾವಣೆಯು ಕಾಣುತ್ತದೆ. ಐ.ಟಿ.ಬಿ.ಟಿ. ಕಂಪನಿಗಳು ಬೆಳೆದಂತೆ ವಿದೇಶಿ ಸಂಸ್ಕೃತಿ ನಮ್ಮ ದೇಶದ ಸಂಸ್ಕೃತಿಯನ್ನು ಹಾಳು ಮಾಡುತ್ತಾ ಬಂದಿದೆ. ಜೊತೆಗೆ ಹೆಣ್ಣು ತನ್ನ ಸ್ವತಂತ್ರ ಜೀವನವನ್ನು ಆಯ್ಕೆ ಮಾಡಿಕೊಳ್ಳುವ ಧೈರ್ಯ ಬಂದಿದೆ.

ಅಮ್ಮನ ಅಂತರ್ಧ್ಯಾನದ ಆಟೋಗ್ರಾಫ್ ಕಥೆಯು ವಿಭಿನ್ನ ರೂಪದಲ್ಲಿ ಸಾಗುತ್ತದೆ.

ಅಮ್ಮನ ಆಟೋಗ್ರಾಫ್ ಕಥೆ ಅಮ್ಮ ಆಗ ತಾನೇ ಸಾರಿಗೆ ಉಪ್ಪು ಹಾಕಿದ ಕೈಯಲ್ಲೇ ಮಗನಿಗೆ ಪತ್ರ ಬರೆದಿರುವಷ್ಟು ಮನಸ್ಸಿಗೆ ಹತ್ತಿರವಾಗಿದೆ ಪತ್ರದ ಮೂಲಕ ಪ್ರೀತಿ ಕಳುಹಿಸುತ್ತಿದ್ದ ಅಮ್ಮ, ಮಗನ ಬದುಕು ಚೆಂದವಾಗಿರಲಿ ಎಂದು ಅವಳು ಹೇಳುತ್ತಿದ್ದ ಕಿವಿ ಮಾತುಗಳು ಪ್ರತಿಯೊಬ್ಬರಿಗೂ ಅವರಮ್ಮನನ್ನು ನೆನಪು ಮಾಡಿಸುವಷ್ಟು ಬೆಚ್ಚಗಿದೆ. ಈ ಕಥೆಯು 'ಅಮ್ಮ ದಾರಿ ತಪ್ಪಿದ್ದಳೇ? ತಪ್ಪು ಮಾಡಿದ್ದಾಳೆ? ಈ ಅನುಮಾನ ಕಥೆಗೆ ವಿಶಿಷ್ಟತೆಯನ್ನು ತಂದುಕೊಟ್ಟಿದೆ! ಈ ಅನುಮಾನ ಇಲ್ಲದಿದ್ದರೆ ಇದು ಅತ್ಯಂತ ಸಾಧಾರಣ ಕಥೆ ಬಾಲಿಶ ಕಥೆ ಅನ್ನಿಸಿ ಬಿಡುತ್ತಿತ್ತು.

ಅಪರಿಮಿತ ಮೋಹ ನೆನಪು ಎಂದರೆ ಅಮ್ಮ ಅವಳು ತನ್ನ ಪ್ರೀತಿಯ ಮೂಲಕ ಜೀವನಕ್ಕೆ ಬೆಳಕು ಆಗಿರುತ್ತಾಳೆ. ಮಗನನ್ನು ವಿದ್ಯಾವಂತನಾಗಿ ಸಂಸ್ಕಾರವಂತನಾಗಿ ಬೆಳೆಸುವ ಹಾರೈಕೆ ಹಾಗೂ ಆರೈಕೆ ಅವಳದ್ದು. ಅಮ್ಮ ನಾಲ್ಕನೇ ಕ್ಲಾಸಿನವರೆಗೂ ಓದಿದ್ದರೂ ಮಗನನ್ನು ಒಳ್ಳೆಯ ವಿದ್ಯಾವಂತನನ್ನಾಗಿಸಿ ಕೈತುಂಬ ಸಂಬಳ ತರುವಂತಹ ಜವಾಬ್ದಾರಿ ಯುವಕನಾಗಿ ಮಾಡುವ ಬಯಕೆ ಅವಳದು. ಮಗ ಒಳ್ಳೆಯ ಗಂಡನಾಗಬೇಕು, ಒಳ್ಳೆಯ ತಂದೆಯಾಗಬೇಕು ಎಂಬ ಕನಸು ಅವಳದ್ದು.

ನನ್ನ ತರಹದ ಕತ್ತಲೆಯ ಬದುಕು ನಿನಗೆ ಬೇಡ ಎಂದು ಹೃದಯ ಪೂರ್ವಕವಾಗಿ ಆಶಿಸಿದ್ದಳು. ತನ್ನ ತಾಯಿಯನ್ನು ಸ್ನಿಗ್ಧ ಸುಂದರಿ, ಸಾಧ್ವಿ ಮಣಿ, ಪ್ರೀತಿಯ ಹುಚ್ಚಿ ಎಂದೆಲ್ಲ ಕರೆಯುತ್ತಾ ತನ್ನ ಮಗಳ ನೋಟ ಹಾಗೂ ನಗುವಿನಲ್ಲಿ ಪ್ರತಿಕ್ಷಣವು ಅಮ್ಮನನ್ನೇ ನೆನಪಿಸಿಕೊಳ್ಳುತ್ತಾರೆ. ನೀನು ಎರೆದ ಪ್ರೀತಿಯನ್ನು ತನ್ನ ಮಕ್ಕಳಿಗೆ ನಾನು ಕೊಡಲು ಆಗುತ್ತಿಲ್ಲ ಎನ್ನುತ್ತಾರೆ. ಈ ಕತೆಯ ವಿಶೇಷ ಎಂದರೆ ಅಮ್ಮ ಮಗನ ಪತ್ರಗಳ ಮೂಲಕ ಸಂಭಾಷಿಸುತ್ತಾರೆ. ಅಮ್ಮ ತನ್ನ ಜೀವನದ ಬಗ್ಗೆ ಬರೆದ ಆಟೋಗ್ರಾಫ್ ಅವಳ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಂತೆ ಇತ್ತು ಎಂದು ಬಿಂಬಿಸುತ್ತಾರೆ.

ಹಾಗೆಯೇ ಈ ಕಥೆಯು ಪ್ರಮುಖ ಚಿತ್ರಣವೆಂದರೆ ತನ್ನ ಕಾಲೇಜು ದಿನಗಳಲ್ಲಿ ತಮ್ಮ ಮನೆಗೆ ಬಂದು ಹೋಗುತ್ತಿದ್ದ ಗಂಡಸರನ್ನು ನೋಡಿ ಮಗನಿಗೆ ಅನುಮಾನ. ತನ್ನ ತಾಯಿ ಚಿಕ್ಕ ವಯಸ್ಸಿನಲ್ಲಿ ನಮ್ಮ ಅಪ್ಪನನ್ನೇ ಕಳೆದುಕೊಂಡವಳು ಎಷ್ಟು ಸುಂದರಿ. ನನ್ನನ್ನು ಕಾಲೇಜಿಗೆ ಓದಿಸುವ ಅವಳಿಗೆ ದುಡ್ಡು ಬೇಕು ಅದಕ್ಕೇನಾದರೂ ತಪ್ಪು ದಾರಿ ತುಳಿದಿದ್ದಾಳೆಯೇ ಎಂದು ಅನುಮಾನಪಡುತ್ತಾರೆ. ಅದರೆ ಅಮ್ಮ ತನ್ನ ತಂದೆಯ ನೆನಪು ಮಾಡಿಕೊಳ್ಳದೇ ಅವಳು ಯಾವತ್ತು ರಾತ್ರಿಯ ಊಟವನ್ನು ಮಾಡುತ್ತಿರಲಿಲ್ಲ ಇಂತಹವಳಿಗೆ 'ಹಾದರಗಿತ್ತಿ' ಎಂದೆಲ್ಲ ಬೈಯ್ದು ಬಿಟ್ಟೆ. ಈ ನನ್ನ ಮಾತುಗಳನ್ನು ಕೇಳಿ ಎದೆಗೆ ಕಲ್ಲು ಇಟ್ಟಂತಹ ಮಾತುಗಳಿಂದ ತಾಯಿ ತನ್ನ ಸಾವಿಗೆ ಒಂದು ರೀತಿಯಲ್ಲಿ ಅವರೇ ಕಾರಣರಾಗುತ್ತಾರೆ.

ತನ್ನ ಕಾಲೇಜು ದಿನಗಳಲ್ಲಿ ಅಮ್ಮನ ಶೀಲದ ಬಗ್ಗೆ ಅನುಮಾನ ಹುಟ್ಟಿ ಆಡಿದ ಮಾತು ನೆನೆದು ಈಗಲೂ ನಿರೂಪಕರು ಪಶಾತ್ತಾಪ ಪಡುತ್ತಾರೆ ಭಾಂಧವ್ಯದ ಜೊತೆ ಸ್ನೇಹದಿಂದ ನಡೆದುಕೊಳ್ಳುವ ರೀತಿಯನ್ನು ಹೆಜ್ಜೆ ಹೆಜ್ಜೆಗೂ ಕಲಿಸಿ ಸ್ವಾಧ್ವಿಮಣಿಯಂತೆ ಬದುಕಿದ ಅಮ್ಮನ ಬಗ್ಗೆ ಬೇಸರಿಸಿದ್ಯಾಕೆ ಎಂದು ಇಂದಿಗೂ ಕೂಡ ನೋಯುತ್ತಿದ್ದಾರೆ.

ದಲಿತ ಸಮಾಜದ ಕಷ್ಟಕರವಾದ ಹೋರಾಟದ ಜೀತ ಪದ್ಧತಿಯನ್ನು ಮರಯೋಗಿ ಮಕ್ಕಳ ತಿಮ್ಮಕ್ಕ ಕಥಾ ಪ್ರಪಂಚದೊಳಗೆ ತಿಮ್ಮಕ್ಕನ ನೋವಿಗೆ ಸ್ಪಂದಿಸದೆ ವಯಸ್ಸಿನಿಂದ ಅವಳಿಗೆ ಹೊಡೆತ ತಿನ್ನುವಂತೆ ಮಾಡಿತ್ತು. ಗಂಡನಿಗೆ ಬಿದ್ದ ಕನಸಿನ ದೈವ ಪ್ರೇರಣೆಯಂತೆ ಚಿಕ್ಕಯ್ಯ ತಿಮ್ಮಯ್ಯ ದಂಪತಿಗಳು ಹುಲಿಕಲ್ ಕುಂದಾಪುರ ರಸ್ತೆಯಲ್ಲಿ ಮಕ್ಕಳಿಲ್ಲದ ತಾವು ಮಕ್ಕಳಂತೆ ಗಿಡಗಳನ್ನು ನೆಟ್ಟು ಪೋಷಿಸಿ ಸಮಾಜಕ್ಕೆ ಮಾದರಿಯಾದ ಹಳ್ಳಿಯ ಹೆಣ್ಣು ಮಗಳ ಸಾಧನೆಯನ್ನು ಕಥೆ ಗುರುತಿಸುತ್ತದೆ.

ಈ ರೀತಿಯಲ್ಲಿ ಕಥೆಗಾರರು ಮುಗ್ಧತೆ ಹಾಗೂ ವಾಸ್ತವ ಕಥೆಗಳ ಮುಖಾಮುಖಿಯನ್ನು ಇವರ ಕಥೆಗಳಲ್ಲಿ ತರುತ್ತಾರೆ. ವಾಸ್ತವ ಲೋಕವನ್ನು ಚಿತ್ರಿಸುವಾಗ ವ್ಯವಸ್ಥೆಯ ಕುಂದುಕೊರತೆಯ ಕೊರಗು ಚಿತ್ರಗಾರಿಕೆಯಲ್ಲಿ ಕಾಣಬಹುದು. ನಿರುದ್ವಿಗ್ನ ಭಾಷಾ ಪ್ರವಾಹವನ್ನು ಎಲ್ಲಾ ಕಥೆಗಳಲ್ಲೂ ಕಾಣಬಹುದು. ಅನುಭವಕ್ಕೆ ಬಂದಂತೆ, ತಮಗೆ ಸರಿ ಕಂಡದನ್ನು ಮುಚ್ಚು ಮರೆಯಿಲ್ಲದೆ ಹೇಳಿದ್ದಾರೆ. ಸಮಾಜವಾದದ ಬಗ್ಗೆ ವಸ್ತು ನಿಷ್ಠ ಧೋರಣೆ ಇರುವುದರಿಂದ ಸಮಾಜದ ಅನೀತಿ, ಅನ್ಯಾಯ, ವ್ಯಭಿಚಾರ ಎಲ್ಲದರ ಮೇಲು ಬಹಳ ನೈಜವಾಗಿ ಬೆಳಕು ಚೆಲ್ಲಿದ್ದಾರೆ.

ಪಾತ್ರದ ಮನಸ್ಸುಗಳನ್ನು ಅಥವಾ ಪಾತ್ರದ ವಿಚಾರಗಳನ್ನು ಬಹಳಷ್ಟು ಕಥೆಗಳು ಕಥೆಗಾರರು ನಿರೂಪಕರಾಗಿ ನಿರೂಪಿಸುತ್ತಾರೆ. ಕಥೆಯ ಕನಸು ಉತ್ತಮ ಪುರುಷದಲ್ಲಿದೆ. ಸೌಧಾಮಿನಿ ಅಪಾರ್ಟ್‌ಮೆಂಟ್‌ನಲ್ಲಿ ಮತ್ತು ದೇವರ ಜೋಳಿಗೆಯಲ್ಲಿ ಇಂತಹ ತಂತ್ರಗಾರಿಕೆ ಎದ್ದು ತೋರುವುದು. ಅನುಸೂಯಮ್ಮನ ಗರಡಿಮನೆ, ಊರು ಮತ್ತು ದೇವರು, ಸೌಧಾಮಿನಿ ಅಪಾರ್ಟ್‌ಮೆಂಟ್, ಕಾಮರಾಜನ ವಿಂಡೋ ಶಾಪಿಂಗ್ ಕಥೆಗಳ ಕಲ್ಪಕತೆಯು ಓದುಗನ ಅನುಭವ ವಲಯಕ್ಕೂ ಮೀರಿ ಮೇಲಿಂದ ಮೇಲೆ ಗಾಬರಿಗೊಳಿಸುತ್ತದೆ.

ಸಂಬಂಧಗಳಿಂದ ಮನಸ್ಸಿಗೆ ನೋವು ತರಿಸಿಕೊಂಡು ಸಂದರ್ಭಗಳೇ ಇರುವ ಅನಾಥ ಮನಸ್ಸುಗಳು ಅಪ್ಪನ ಟೆಲಿಗ್ರಾಮ್, ಸೌಧಾಮಿನಿ ಅಪಾರ್ಟ್‌ಮೆಂಟ್, ಅಮ್ಮನ ಆಟೋಗ್ರಾಫ್, ಅಪ್ಪ ಎಂಬ ಪ್ರಾರಬ್ಧ ಅಮ್ಮ ಎಂಬ ಉಪಲಬ್ಧ, ಮುಂತಾದ ಕಥೆಗಳಲ್ಲಿ ಹೆಣ್ಣು ಸಂಸಾರ ಇಂತಹ ವಿಷಯಗಳನ್ನು ಬರೆಯುವಾಗ ಇರುವಷ್ಟೇ ತಾದ್ಯತ್ಮತೆ ಅವರ ದೇವರ ಜೋಳಿಗೆ ಕಥೆಯಲ್ಲಿ ದೇವರನ್ನು ಹುಡುಕಿಕೊಂಡು ಹೋಗುವ ನಿಷ್ಠ ಭಕ್ತಿ ಕುತೂಹಲದಿಂದ ಕೂಡಿರುವುದನ್ನು ಕಾಣಬಹುದು. ಕಾಳರಾತ್ರಿಯ ಪಯಣದ ಅನುಭವದಾಳಕ್ಕೆ ಕರೆದೊಯ್ದು ಬೆಚ್ಚಿ ಬೀಳಿಸುತ್ತಾರೆ.

ನೋವು, ಹತಾಶೆ, ಕಷ್ಟ ಕಾರ್ಪಣ್ಯ, ಫಕೀರರ ಅನುಭವ ಸಂಪತ್ತಿಯ ವಲಯವನ್ನು ವಿಸ್ತರಿಸಿದೆ. ಸಮಾಜದಲ್ಲಿ ತೀರ ಹತ್ತಿರದಿಂದ ಕಂಡ ವ್ಯಕ್ತಿಗಳು ಇವರ ಕತೆಯ ಪಾತ್ರಗಳಾಗಿರಬಹುದು ಏನೋ ಅನ್ನಿಸುವಷ್ಟು ಪ್ರಾಮಾಣಿಕ ಅನುಭವ ವಿಸ್ತಾರ ಇವರ ಕಥೆಗಳಲ್ಲಿ ಇದೆ.

ಫಕೀರರು ಬದಲಾವಣೆಗೆ ಹಾಗೂ ಪ್ರಾಯೋಗಿಕತೆಗೆ ಹೊಸ ಮಗ್ಗಲನ್ನು ನೇಯ್ದುಕೊಡುತ್ತಾರೆ. ಇವರ ಕಥಾಶಕ್ತಿ ಕಲ್ಪನೆಗಿಂತ ವಾಸ್ತವ ಜಗತ್ತಿನ ಅಂತಃ ಸತ್ವವನ್ನು ಹುಡುಕುವ ಪ್ರಯತ್ನದಲ್ಲಿದೆ. ಗ್ರಾಮೀಣ ಮನಸ್ಸುಗಳು ನಾಗರಿಕ ಜಾಗತೀಕರಣದ ಸಂಕೋಲೆಯಲ್ಲಿ ಬಂಧಿತವಾಗಿ ಬದುಕು ಸಂಕೀರ್ಣಗೊಳ್ಳುತ್ತಾ ಸಾಗುತ್ತಿರುವ ಹಂತವನ್ನೆ ಬಹಳ ಸೂಕ್ಷ್ಮವಾಗಿ ಇವರ ಕಥೆಗಳು ಗುರುತಿಸುತ್ತವೆ.

ಕೃತಕ ಹಾಗೂ ಸರಳ ಸಂಬಂಧಾತ್ಮಕ ಭಾವನೆಗಳ ಶೋಧನೆ ಇವರ ಕಥೆಗಳಲ್ಲಿ ಸಾಂದ್ರವಾಗಿ ಮೂಡಿಬಂದಿದೆ. ಹೀಗೆ ಫಕೀರರ ಅವರ ಒಟ್ಟಾರೆ ಕಥಾ ಬೆಳವಣಿಗೆಯ ವಿಶೇಷಗಳನ್ನು ಗುರುತಿಸುವ ಕಾರ್ಯ ಮಾಡಿದ್ದೇನೆ.

**ಅಡಿ ಟಿಪ್ಪಣಿಗಳು:**

1. ಕ್ಷಣ ಕತ್ತಲೆಯ ಭಯ (ಅಮ್ಮನ ಆಟೋಗ್ರಾಫ್) – ಪುಟ ಸಂಖ್ಯೆ: 3
2. ಕ್ಷಣ ಕತ್ತಲೆಯ ಭಯ (ಅಮ್ಮನ ಆಟೋಗ್ರಾಫ್) – ಪುಟ ಸಂಖ್ಯೆ: 4
3. ಕ್ಷಣ ಕತ್ತಲೆಯ ಭಯ (ಅಮ್ಮನ ಆಟೋಗ್ರಾಫ್) – ಪುಟ ಸಂಖ್ಯೆ: 7
4. ಕಾಮರಾಜನ ವಿಂಡೋಶಾಪಿಂಗ್ (ದೇವರ ಜೋಳಿಗೆ) ಪುಟ ಸಂಖ್ಯೆ: 66
5. ಆಲ್ಬರ್ಟ್ ಪಿಂಟೋ (ದೇವರ ಜೋಳಿಗೆ) – ಪುಟ ಸಂಖ್ಯೆ: 85
6. ಪುಟ ಸಂಸ್ಕಾರ (ದೇವರ ಜೋಳಿಗೆ) – ಪುಟ ಸಂಖ್ಯೆ: 147
7. ಪುಟ ಸಂಸ್ಕಾರ (ದೇವರ ಜೋಳಿಗೆ) – ಪುಟ ಸಂಖ್ಯೆ: 148

# ಅಧ್ಯಾಯ – ೮

## ಫಕೀರ ಅವರ ಕಥೆಗಳ ಭಾಷೆ, ನಿರೂಪಣೆ ಶೈಲಿ:

Dress is Address ಎಂಬಂತೆ, ಶೈಲಿಯು ಕತೆಗಾರರ ವ್ಯಕ್ತಿತ್ವದ ಬಿಂಬ. ಓದಿಸಿಕೊಂಡು ಹೋಗುವ ಫಕೀರರ ಜಾಯಮಾನ ಎಲ್ಲಾ ಕತೆಗಳಲ್ಲೂ ಇದೆ. ಅದಕ್ಕೆ ಅವರು ಆರಿಸಿಕೊಳ್ಳುವ ವಿಷಯ ನೈಪುಣ್ಯತೆಯೇ ಕಾರಣ. ಒಂದು ವಿಷಯವನ್ನು ಆರಿಸಿಕೊಂಡರೆ ಅದನ್ನು ಬಿಡಿಸಿಡುವ ಕುಸುರಿಗಾರಿಕೆ ಬಹಳ ಸುಂದರವಾಗಿ, ಅವರೆಲ್ಲಾ ಕಥೆಗಳಲ್ಲಿ ಮೂಡಿದೆ. ಅನುಭವ ವಿಸ್ತಾರ ಹೆಚ್ಚಾಗುತ್ತಾ ಹೋದಂತೆ ಕೆಲವು ಕತೆಗಳಲ್ಲಿ ವರದಿಯಂತೆ ನೀರಸವಾದ ಕೆಲವು ಉದಾಹರಣೆಗಳು ಇವೆ. ಉದಾ: ಕೊಪ್ಪಿವಾಡನ ಹೊಟೇಲ್‌ನಲ್ಲಿ ಕೆಲಸ ಮಾಡುವ ಕೆಲಸಗಾರರ ವಿವರಗಳು ತೀರಾ ಜಾಳಾಗಿ ಹೇಳಕೊಳ್ಳುತ್ತಾ ಸಾಗಿ ಕತೆಯ ಚುರುಕು ಮುಂದುವರಿಕೆಗೆ ತೊಂದರೆ ಕಾಣುವುದು.

ಬಹುಪಾಲು ಕತೆಗಳು ನಿರೂಪಕರೇ ಉತ್ತಮ ಪುರುಷದಲ್ಲಿ ಕತೆಯನ್ನು ಹೇಳಕೊಳುವ ತಂತ್ರದಿಂದ ನಿರೂಪಿಸುತ್ತಾರೆ. ಇಲ್ಲಿ ಪಾತ್ರಗಳು ಹೇಳಕೊಳ್ಳುವಂತಿದ್ದರೆ ಇನ್ನಷ್ಟು ಆಕರ್ಷಕವಾಗುತ್ತಿತ್ತು. ಸರಳ ನೇರ ನಿರೂಪಣೆ ಸಾದಾಸೀದಾ ಬರವಣಿಗೆ, ಅನುಭವ ಸಾಂದ್ರತೆಯಿಂದಾಗಿ ಎಷ್ಟೋ ವಿಷಯಗಳನ್ನು ಮಾತನಾಡುತ್ತಾ ಸಾಗುತ್ತಾರೆ. ಲೈಂಗಿಕತೆಯನ್ನು ಕುರಿತಾಗಿ ಬಿಚ್ಚುಮನಸ್ಸಿನಿಂದ ಮಾತನಾಡಿದರೂ ಅಸಹ್ಯ ಎನಿಸದು. ಆದರೆ, ಕೆಲವು ಸಂದರ್ಭಗಳಲ್ಲಿ ಓದುಗನನ್ನು ಅಂತಹ ಅನುಭವಗಳು ಬೆಚ್ಚಿಸುವವು ಕಾರಣದಿಂದ ಪಠ್ಯವಾಗಿ ಓದಿಸಲು ಸಾಧ್ಯವಾಗುವುದಿಲ್ಲ. ಈ ಕತೆಗಳನ್ನು ಓದುಗನಿಗಾಗಿ ಬರೆದುವು ಎಂಬುದು ಸ್ಪಷ್ಟವಿದೆ. ಸಾಮಾಜಿಕ ನ್ಯಾಯ, ಸ್ತ್ರೀಪರ ಚಿಂತನೆಗಳನ್ನು ನೋಡಿದಾಗ ಕತೆಗಾರರ ಪ್ರಬುದ್ಧತೆ ಖುಷಿಕೊಡುತ್ತದೆ. ಹಾಗೆಯೇ ದೇವರ ಜೋಳಗೆಯಂತಹ ಕತೆಯಲ್ಲಿ ಕಾಣುವ ಅವರ ಆಧ್ಯಾತ್ಮಿಕ ಮನಸ್ಸು ಅವರ ಎತ್ತರದ ಚಿಂತನೆಯ ಕತೆಯಾಗಿ ಹೊರಹೊಮ್ಮಿರುವುದನ್ನು ಗುರುತಿಸಿದ್ದೇನೆ.

ಫಕೀರರ ಕತೆಗಳಲ್ಲಿ ಊರು ಮತ್ತು ಪಾತ್ರಗಳಿಗೆ ಹೆಸರು ಕೊಡದೆ ಇರುವುದು ಕೆಲವು ಸಾರಿ ಗೊಂದಲಕ್ಕೆ ಕಾರಣವಾಗಿದೆ. ಕನಸುಗಾರಿಕೆಯೂ ಇವರ ಕಥನ ತಂತ್ರಗಳಲ್ಲಿ ಒಂದು. ಬಯ್ಗಳ ಸಂದರ್ಭದಲ್ಲಿ ಪ್ರಾದೇಶಿಕ ಭಾಷೆಯ ಪ್ರಯೋಗ ಕಾಣುತ್ತೇನೆ. ನಿಶ್ಯಬ್ದದೊಳಗಿನ ಶಬ್ದಗಳಂತಹ ಭಾಷಾ ವಿಶೇಷ ಪ್ರಯೋಗಗಳಿವೆ. ಹಲವು ಕಡೆ ಅವರ ಕನಸುಗಾರಿಕೆ ಭಾವುಕತನ ಅವರ ಕವಿ ಮನಸ್ಸನ್ನು ಇಣುಕುವಂತೆ ಮಾಡಿವೆ.

ಜನ ನುಡಿಯ ಪ್ರಯೋಗ, ಸ್ವಗತಗಳು, ಗ್ರಾಮೀಣ ಪರಿಸರದ ಭಾಷಿಕತೆ ಗ್ರಾಮೀಣ ಬದುಕಿನ ಹಿಡಿದು ಇಡುವಲ್ಲಿ ಪರಿಣಮಕಾರಿ ಕೆಲಸ ಮಾಡಿದ್ದಾರೆ. ಅಸಹಾಯಕತೆ ಮುಗ್ಧತೆ ಸರಳತೆಗಳು ಇವರ ಪಾತ್ರಗಳಲ್ಲಿ ಕಟ್ಟಿಕೊಳ್ಳುತ್ತಾ ಸಾಗಿದೆ.

ಸಾಮಾಜಿಕ ಪರಿವರ್ತನೆಗೆ ನಾಂದಿಯಾಗುವ ಪತ್ರಕರ್ತ ನರಸಿಂಹ ಇನ್ಸ್‌ಪೆಕ್ಟರ್ ರಾಮಸ್ವಾಮಿ ಇಂತಹ ಪಾತ್ರಗಳಲ್ಲಿ ಬಿಂಬಿತವಾಗಿದೆ. ಕಥೆಗಳು ಅನುಭವವನ್ನು ಕೆದಕಿ ವೈಯುಕ್ತಿಕ ಮೌಲ್ಯಗಳನ್ನು ಶೋಧಿಸುವಲ್ಲಿ ಅವಿರತ ಪ್ರಯತ್ನ ಮಾಡಿದ. ಅಂತೇ ಇದೆ ಬದುಕಿನ ಮೂಲಭೂತ ಸಮಸ್ಯೆಗಳನ್ನು ಕುರಿತು ಬರೆಯುವ ದಿಟ್ಟತನ ವೈಚಾರಿಕತೆ ಭೌತಿಕತೆ ಇವರ ಕಥೆಗಳ ಗುಣಗಳು. ಊರು ಮತ್ತು ದೇವರು, ಸಾಬರ ಹುಡುಗಿ ಅನಾಥ ಮನಸ್ಸಿನ ಕೋಪಿವಾಡನ ಹೋಟೆಲ್ ಸಮುದಾಯದ ಜೀವನ ದರ್ಶನದ ಆತ್ಮಕಥನ ಎನ್ನಿಸಿದೆ.

ಇವರ ಕಥೆಗಳು ಮಾನವಿಕ, ಸಾಮಾಜಿಕ ನೆಲೆಯಲ್ಲಿ ಅವಲೋಕನೆಗೆ ನಿಲುಕುವಂತಹದು ಅನುಸೂಯಮ್ಮನ ಗರಡಿ ಮನೆ, ಸೌದಾಮಿನಿ ಅಪಾರ್ಟ್‌ಮೆಂಟ್, ಪೀಪಿಂಗ್‌ಟಾಮ್ ಕಾಮರಾಜನ ವಿಂಡೋಶಾಪಿಂಗ್, ಕತೆಗಳಲ್ಲಿ ಹೆಣ್ಣನ್ನು ಸಮಾಜದಲ್ಲಿ ನಡೆಸಿಕೊಳ್ಳುವ ಬರ್ಬರ ಬದುಕಿನ ಅನಾವರಣಗಳು ಇವೆ. ಇಲ್ಲೆಲ್ಲಾ ಪ್ರೀತಿಯ ನೆಲೆಗಿಂತ ಮೋಹಕತೆಯ ನೆಲೆಗಿಂತ ಆಕರ್ಷಕ ನೆಲೆಗಿಂತ ಬಲಾತ್ಕಾರವೇ ಮೇಲಾಗಿದೆ. ಬಹಳಷ್ಟು ಸಂದರ್ಭದಲ್ಲಿ ಲೈಂಗಿಕ ವಿವರವನ್ನು ನೀಡುವ ಸಂದರ್ಭದಲ್ಲಿ ಸೂಚ್ಯವಾಗಿ ಹೇಳುವುದನ್ನು ವಿಸ್ತರಿಸಿ ಗೊಂದಲಕ್ಕೆ ಈಡುಮಾಡಿದ. "ಅವಳು ಪಿಯುಸಿ ಓದುತ್ತಿರುವಾಗಲೇ ಪ್ರಿನ್ಸಿಪಾಲ್‌ರ ಮಗನಿಗೆ ಲವ್‌ಲೆಟರ್ ಬರೆದಿದ್ದು, ಕಾಲೇಜಿನ ವಾರ್ಷಿಕ ಕಾರ್ಯಕ್ರಮದ ವೇಲೆ ಕಾಲೇಜಿನ ಯೂನಿಯನ್ ಲೀಡರ್‌ನ ಜೊತೆ ಕಾಲೇಜು ಕ್ಯಾಂಪಸ್‌ನಲ್ಲೇ ರಾತ್ರಿ ಬರೀ ಬೆತ್ತಲೆಯಲ್ಲಿ ವಾಚ್‌ಮನ್‌ಗೆ ಸಿಕ್ಕಿಹಾಕಿಕೊಂಡಿದ್ದು, ಯಾವನೋ ಅವಳನ್ನು ಇಷ್ಟಪಟ್ಟು ಮದುವೆಯಾಗುತ್ತೇನೆಂದು ಬಂದಾಗ, ಅವನ ಮೂಲಾಮೂಲವನ್ನರಿಯದೇ ಅವನ ಜೊತೆ ಓಡಿಹೋಗಲು ರೆಡಿಯಾದಾಗ ಅನವಪ್ಪನ ಕೈಗೆ ಸಿಕ್ಕು ತಿಂಗಳುಗಟ್ಟಲೇ ರೂಮಿನಲ್ಲಿ ಕೂಡಿಹಾಕಿದ್ದು, ಎಲ್ಲವೂ ಎಲ್ಲಾ ಹುಡುಗ ಹುಡುಗಿಯರಲ್ಲಿ ಬಾಯಿಪಾಠವಾಗಿತ್ತು". ಇಂತಹ ಪ್ರಸಂಗಗಳಲ್ಲಿ ಹೆಣ್ಣಿನ ಹದಮೀರಿದ ಗಂಡು. ಇವರ ಕಥೆಯಲ್ಲಿ ಒಂದೊಂದು ಸಲ ಬಹಳ ಅಪಾಯಕಾರಿ ಎನ್ನಿಸುತ್ತದ. ಅವಳನ್ನು ಗಂಡುಬೀರಿತನ ವ್ಯಕ್ತವಾಗಿದೆ.

ಕೋಪಿವಾಡನ ಹೋಟೆಲ್, ಅನುಸೂಯಮ್ಮನ ಗರಡಿ ಮನೆ, ಇಂತಹ ಕತೆಗಳಲ್ಲಿ ಬಡವರು ಕೆಳ ಮಧ್ಯಮ ವರ್ಗದ ಜೀವನವನ್ನು ಅನುಕಂಪದಿಂದ ಚಿತ್ರಿಸುತ್ತಾರೆ. ಶೋಷಿತರ ಪರವಾದ ಮಾನವೀಯತೆ ವೈಚಾರಿಕ ನ್ಯಾಯ ಓದುಗರನ್ನು ತಲ್ಲಣಗೊಳಿಸುತ್ತದೆ. ಮಮತೆಯ ಅಂತಃಕರಣದ ಸಂಸಾರದ ಪಾತ್ರಗಳು ಇವರ ಕಥೆಗಳಲ್ಲಿ ಸಿಗುತ್ತವೆ. ಊರು–ಕೇರಿ, ಜನರು ಭಾಷೆ ಎಲ್ಲವೂ ಒಂದು ರೀತಿಯಲ್ಲಿ ಇವರ ಊರಿನ ಬನವಾಸಿ, ಕದಂಬರ ಶ್ರೀ ಮಧುಕೇಶ್ವರ ದೇವಸ್ಥಾನ, ವರದೆಯ ತಪ್ಪಲು ಹಳ್ಳಿಗಳಾದ ಚಿನ್ನಮುಳಗುಂಡ, ಹಿರೇಕೆರೂರು, ಬ್ಯಾಡಗಿ, ರಾಣೆಬೆನ್ನೂರು, ದಾವಣಗೆರೆ, ಹೀಗೆ ಬಯಲುಸೀಮೆಯ ಕಪ್ಪು ಸೊಗಡು, ಬಿರುಬಿಸಿಲಿನ ಜಳ, ಜೋಳದ ತೆನೆ, ಹತ್ತಿಗಿಡ, ಉತ್ತರಕನ್ನಡ, ಶಿವಮೊಗ್ಗ, ಮಲೆನಾಡಿನ ಕಾಡಿನ ತಂಪು ಎಲ್ಲವೂ ಕಥೆಯ ಅಂಚಿನಲ್ಲಿ ಸುಳಿದಾಡುತ್ತದೆ. ಹಾಗೆಯೇ ಇವರ ಕಥೆಗಳಲ್ಲಿ ಬದುಕಿನ ಅಪಾರ ಅನುಭವವನ್ನು ಪಕ್ವತೆಯನ್ನು ಕಟ್ಟಿಕೊಟ್ಟಿದೆ. ವಿಶೇಷವಾಗಿ ಹಿಜಡಾ ಹಾಗೂ ಲಾರಿ ಡ್ರೈವರ್‌ಗಳು ಕ್ಲೀನರ್‌ಗಳ ಕಥೆಯಂತೂ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ಈ ಎಲ್ಲಾ ಪ್ರದೇಶಗಳ ಮಿಡಿದು ನೋಡುವ ಸೃಜನಾತ್ಮಕತೆ ಎದ್ದು ಕಾಣುತ್ತದೆ.

ಯಕ್ಷ ಪ್ರಶ್ನೆಯಂತಹ ಕಥೆಯಲ್ಲಿ ಬರುವ ಯಕ್ಷಗಾನ ಕಲೆಯನ್ನು ಬದುಕಾಗಿಸಿಕೊಂಡು ಅಲ್ಲಿಯ ಮಂಜಯ್ಯ ಹೆಗ್ಗಡೆ ಅವರ ಸುತ್ತ ಎಣೆದುಕೊಳ್ಳುವ ದೆವ್ವ ದೈವ ಆರಾಧನೆಗೆ ಅವರ ಗೂಡು ಆಟಗಳನ್ನು ಗಮನಿಸಿದ್ದಾರೆ. ಪಾಡ್ದನ ದೇವರ ಪೂಜೆ, ಕೋಲ ಪೂಜೆ ಇವುಗಳ ಬಗ್ಗೆ ಬರಹಗಾರರು ಬಹಳಷ್ಟು ತಿಳಿದುಕೊಂಡಿರುವುದನ್ನು ಗಮನಿಸಬಹುದು. ಯಕ್ಷ ಪ್ರಶ್ನೆಯಂತೆ ಅಲ್ಲ ಜೀವನದ ನಿಜ ಚಿತ್ರಣ ಸಾಧಾರಣವಾಗಿ ಕಥೆಗಳಲ್ಲಿ ಅನಿರೀಕ್ಷಿತ ತಿರುವು ಅನೂಹ್ಯವಾದ ಅಂತ್ಯ ಇರುತ್ತವೆ. ನಿಜವಾದ ಜೀವನದ ಯಥಾವತ್ ಚಿತ್ರಣ ಇದರ ವೈಶಿಷ್ಟ. ಕಾಮನ ಗಲ್ಲಿಯ ಹುಡುಗರು ಹಲವು ದಶಕಗಳ ಹಿಂದೆ ಆಚರಿಸುತ್ತಿದ್ದ, 'ಕಾಮದಹನ' ಈ ಕಥೆ ಸಣ್ಣಪುಟ್ಟ ವಿವರಗಳೊಂದಿಗೆ ಸುಸ್ಪಷ್ಟವಾಗಿ ಚಿತ್ರಿತವಾಗಿದೆ. ಕಾಮನ ದಹನದ ಆಚರಣೆಯ ಚಿತ್ರಣವನ್ನು ಕಥೆಗಾರ ಚಿತ್ರಿಸಿದ್ದಾರೆ.

ಬಾಲಕಾರ್ಮಿಕ ವಿರೋಧಿ ಕಾನೂನು ರೂಪಿತವಾಗಿದ್ದು, ಸಮಾಜದ ಎಲ್ಲ ವಲಯಗಳಲ್ಲಿ ಪುಟ್ಟ ಮುಗ್ಧ ದೇಹಗಳು ಶ್ರಮದಿಂದ ನಲುಗುತ್ತಿವೆ. ಹೋಟೆಲ್‌ನಲ್ಲಿ ಬಾಲಕ ಕೋಪಿವಾಡ ಸಮಯದ ಕೈಗೊಂಬೆಯಾಗಿ ಕೆಲಸಕ್ಕೆ ಸೇರಿದ್ದ ಆದರೆ ಅವನ ಆಸೆ ತನ್ನ ಊರಿನಲ್ಲಿ ಒಂದು ದೊಡ್ಡ ಹೋಟೆಲ್‌ನ್ನು ತನ್ನ ಊರಿನಲ್ಲಿ ನಿರ್ಮಿಸಬೇಕು, ನಗರದ ತಿಂಡಿ-ತಿನಿಸುಗಳನ್ನು ನಮ್ಮೂರಿನವರಿಗೂ ಅದರ ರುಚಿಯನ್ನು ಮುಟ್ಟಿಸಬೇಕು. ಆದರೆ ಕಾರ್ಮಿಕ ಇಲಾಖೆಯ ಅಧಿಕಾರಿಗಳು ಓದಿ ವಿದ್ಯಾವಂತನಾಗುವುದಿಲ್ಲವೇ ಎಂದೂ ಪ್ರಶ್ನಿಸಿದಾಗ, ಹುಡು ಕೊಡುವ ಉತ್ತರ ಕೇಳದಾಗ ಹುಡುಗನ ಮುಗ್ಧತೆ ಹಿಂದೆ ಸಮಾಜ ತುಂಬಿರುವ ಹುಂಬತನದ ಅರಿವು ಆಗದೆ ಇರದು. ತನ್ನ ಆಸೆಗಳೂ ಎಲ್ಲ ನಿರಾಸೆಯ ಹೊಳೆಯಲ್ಲಿ ಕೊಚ್ಚಿಹೋಗುವುದು. ಕಾನೂನು ಬೇರೆ, ಬದುಕು ಬೇರೆ ಎಂಬ ಸತ್ಯವನ್ನು ಈ ಕತೆ ಮನವರಿಕೆ ಮಾಡಿಕೊಡುತ್ತದೆ.

ಊರು ಮತ್ತು ದೇವರ ಕತೆಯಲ್ಲಿ ಇನ್ಸ್‌ಪೆಕ್ಟರ್ ರಾಮಸ್ವಾಮಿ ಒಬ್ಬ ಮಾದರಿ ಅಧಿಕಾರಿಯಾಗಿ ಬದಲಾವಣೆಗೆ ಗುರಿಯಾಗಿ ತನ್ನ ಕಾನೂನು ತನ್ನ ಕೈಯಲ್ಲಿ ಇದ್ದರೂ ವ್ಯವಸ್ಥೆಯನ್ನು ಎದುರುಹಾಕಿಕೊಳ್ಳಲು ಅಥವಾ ಒಂದಿಷ್ಟು ಬದಲಾವಣೆಯನ್ನು ತರಲಾಗದೆ ಹೋದಾಗ ಊರಿನ ಕೇಂದ್ರಬಿಂದುವಾದ ದೇವಸ್ಥಾನವೇ ತನ್ನ ಬ್ರಹ್ಮಸ್ತ್ರವಾಗಿ ಬಳಸಿ ಮೇಲು ವರ್ಗದ ಪ್ರಾಬಲ್ಯತೆಯನ್ನು ಹೊಡೆದು ಉಳಿಸುತ್ತಾನೆ. ಬಿಸಿ ರಕ್ತದ ಹುಡುಗರು ರಾಮಸ್ವಾಮಿಯಿಂದ ಬೆಂಬಲಿತ ಕುಮ್ಮಕ್ಕಿನಿಂದಾಗಿ ದೇವಸ್ಥಾನದ ಅಧಿಕೃತ ಚುನಾವಣೆಯಲ್ಲಿ ಕಡೆಗೆ ದಲಿತ ನಾಯಕರುಗಳು ಬರುವಂತೆ ವ್ಯವಸ್ಥೆ ಮಾಡಿ ನೂತನ ಕಮಲೆಯ ಅಧ್ಯಕ್ಷನಾಗಿ ಸಿದ್ದೇಶ್ ಕುಮಾರ್ ಹೊಸ ಕರೆಯ ದೇವಸ್ಥಾನವನ್ನು ನವೀಕರಣಗೊಳಿಸಿ, ದೇವಸ್ಥಾನವನ್ನು ಅಭಿವೃದ್ಧಿ ಮಾಡಿದ ಹೊಸಕರೆಯಲ್ಲಿ ಕಾಣೆಯಾಗಿದ್ದ ರಾಮಕೃಷ್ಣಭಟ್ಟರ ಮಗಳನ್ನು ಹುಡುಕಿತರುವ ಮೂಲಕ ಇನ್ಸ್‌ಪೆಕ್ಟರ್ ಜಾತ್ಯಾತೀತೆಯನ್ನು ಊರಿನಲ್ಲಿ ತಂದನು.

ಊರು ಮತ್ತು ದೇವರು ಈ ಕಥೆಯಲ್ಲಿ ದೇವಸ್ಥನ ಮತ್ತು ದೇವಸ್ಥಾನದ ಕಮಿಟಿಯ ಸದಸ್ಯರ ಹಾಗೂ ಅಲ್ಲಿನ ಜಾತೀಯತೆ, ಸ್ವಾರ್ಥಪರತೆ, ಮೇಲ್ವರ್ಗದವರ ಹೀನಾಯ

ದುರ್ವರ್ತನೆಗಳು ಪ್ರಧಾನವಾಗಿ ಆನಂತರ ಪೋಲೀಸ್ ಇನ್ಸ್‌ಪೆಕ್ಟರ್ ಅವರ ಜನಹಿತ ಕಾರ್ಯಾಚರಣೆ ಇನ್ನುಳಿದ ಜಾತಿಯ ವಿದ್ಯಾವಂತ ಯುವಕರ ಒಗ್ಗಟ್ಟು, ಜನ ಹಿತಪರ ಅವರ ಕಾಳಜಿ–ನಿರೂಪಣೆ ಪ್ರಾಧಾನ್ಯ ಪಡೆದಿದೆ. ಇನ್ನೇನು ಕಥೆ ಅಂತ್ಯಕಾಣುತ್ತದೆ ಎನ್ನುವಾಗ ಹಾರಿ ಹೋದ ಹಕ್ಕಿಯನ್ನು ಗೂಡು ಸೇರಿಸಿ ನೆಮ್ಮದಿ ಕಾಣುವ ಪ್ರಸಂಗದ ಚಿತ್ರಣದಿಂದ ಕೊನೆಗೊಳ್ಳುತ್ತದೆ.

ಈ ಎಲ್ಲಾ ಕತೆಗಳು ವಸ್ತು ವೈವಿಧ್ಯ ಹಾಗೂ ಅನುಭವಗಳ ನಿಚ್ಚಳಕೆಯಿಂದ ಕೂಡಿದ್ದು, ಕತೆಗಾರರ ವಯಸ್ಸಿಗೆ ಮೀರಿದ ಪ್ರಬುದ್ಧತೆಯನ್ನು ತೋರಿಸಿವೆ. ಸಮಕಾಲೀನ ಬದುಕಿನ ಸಾಮಾಜಿಕ ಬದುಕುಗಳು ಇಲ್ಲಿ ಚಿತ್ರಿತವಾಗಿದೆ. ಉತ್ತಮ ಚಿತ್ರಕ ಶಕ್ತಿ ಇದ್ದು, ಉತ್ತಮ ಭಾಷಾ ಸಂಪತ್ತಿ ಕತೆಗಳಲ್ಲಿದ್ದು, ಸಂಕ್ಷಿಪ್ತ ವಿವರಣೆಗಳಿಂದ ಕತೆಗೆ ಚುರುಕುತನ ಕಟ್ಟಿಕೊಡಲು ಸಾಧ್ಯವಾಗುವುದು. ಸ್ತ್ರೀಪರ ಕಾಳಜಿ, ಅಮ್ಮನ ಮೇಲಿನ ಮಮತೆ, ಕತ್ತಲೆಯ ಬದುಕಿನ ನೋವುಗಳು, ಸಲಿಂಗಕಾಮ, ಮುಸ್ಲಿಂ ಮನಸ್ಥಿತಿ, ಹೆಣ್ಣು–ಗಂಡಿನ ಆಕರ್ಷಣೆ, ಗಂಡಸಿನ ಕಾಮದಾಹಗಳು, ಮಾನವೀಯ ಸಂಬಂಧಗಳ ವಿವಿಧ ಮಗ್ಗಲುಗಳ ಶೋಧ ನೈಜವಾಗಿ ಬಿಂಬಿತವಾಗಿವೆ. ನಗರೀಕರಣದೊಳಗಿರುವ ಇನ್ನೊಂದು ಮುಖ, ಈ ರೀತಿಯಾಗಿ ಇವರ ಕತೆಗಳು ಹರಿಯುತ್ತಾ ಸಾಗಿವೆ.

# ಅಧ್ಯಾಯ : ೮

## ಸಮಾರೋಪ:

ಕನ್ನಡದ ಇತ್ತೀಚಿನ ಬರಹಗಾರರಾದ ಜಯಂತ್ ಕಾಯ್ಕಿಣಿ, ವಿವೇಕ್ ಶಾನ್‌ಭಾಗ್, ಅಶೋಕ್, ವಸುಧೇಂದ್ರ, ಇವರ ಕಥಾಸಾಹಿತ್ಯ ಪರಂಪರೆಯಲ್ಲಿ ಗುರುತಿಸಿ ಕೊಳ್ಳುವಂತಹವರು ಶ್ರೀಯುತ ಶ್ರೀಧರ ಬನವಾಸಿ ಅವರು. ಫಕೀರ ಎಂಬ ಅಂಕಿತದಿಂದ ಕಥೆಗಳನ್ನು ಬರೆದಿದ್ದಾರೆ. ಅಮ್ಮನ ಆಟೋಗ್ರಾಫ್, ದೇವರ ಜೋಳಿಗೆ ಎಂಬ ಎರಡು ಕಥಾ ಸಂಕಲನಗಳು ಬಂದಿವೆ. ಈ ಎರಡು ಕೃತಿಗಳನ್ನು ನನ್ನ ಎಂ.ಫಿಲ್. ಪದವಿಯ ಪ್ರಬಂಧಕ್ಕೆ ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಿರುತ್ತೇನೆ.

ಜನಪ್ರಿಯತೆ, ಓದು ಪ್ರಿಯತೆ ಹೆಚ್ಚಿಸುವ ಧಾಟಿಯ ಕತೆಗಳು ಇವು ಎಂಬುದನ್ನು ಮುಖ್ಯವಾಗಿ ನಾನು ನನ್ನ ಅಧ್ಯಯನದಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದೇನೆ. ಅದಕ್ಕಾಗಿ ಅವರ ಅನುಭವದ ಆಳ ಹಾಗೂ ವಿಸ್ತಾರಗಳು ಅಂದರೆ ಗ್ರಾಮ ಹಾಗೂ ನಗರ ಬದುಕಿನ ಎರಡು ಮಗ್ಗಲುಗಳು ಚಿತ್ರಿತಗೊಂಡು. ಓದುಗನ ಅನುಭವವನ್ನು ವಿಸ್ತರಿಸುತ್ತದೆ. ಇಂದು ಕಥಾಸಾಹಿತ್ಯಕ್ಕೆ ಹೆಚ್ಚಿನ ಓದುಗ ವಲಯವಿದ್ದು, ಅವರ ಸುತ್ತಲಿನ, ವಾಸ್ತವ ಬದುಕುಗಳ ಕಥೆಗಳಾದರೆ ಮತ್ತಷ್ಟು ಓದಿಸಿಕೊಳ್ಳುವಂತಿರುವುದರಿಂದ ಫಕೀರರ ಕತೆಗಳು ಬಹುಪ್ರಿಯ ಎನಿಸುವುವು.

ಸಾಮಾಜಿಕ ಹಾಗೂ ಕೌಟುಂಬಿಕ ಹಿನ್ನೆಲೆಯಿಂದ ಎಂಬ ಎರಡು ಮಗ್ಗಲುಗಳ ಕಥೆಗಳವು. ಇವರ ಸಾಮಾಜಿಕ ಕತೆಗಳಲ್ಲಿ ಜಾಗತೀಕರಣ ಪ್ರಭಾವ, ದಂಧೆ, ಮಾಫಿಯಾ ಲೋಕ, ದುಬೈನ ಕತ್ತಲ ಬದುಕುಗಳ ಚಿತ್ರಗಳು, ಹಳ್ಳಿಗರಲ್ಲಿ ಇದ್ದಕಿದ್ದಂತೆ ಕಾಣುವ ಬದಲಾವಣೆಗಳು, ಮುಖ್ಯವಾಗಿ ಗುರುತಿಸಿದ್ದೇನೆ.

ಕೌಟುಂಬಿಕ ವಸ್ತು ಧೋರಣೆಯ ಕತೆಗಳಲ್ಲಿ ಮಾನವೀಯ ಸಂಬಂಧಗಳ ತೊಡರು ಮಾನವ ಸಂಶೋಧನೆಗಳು, ಮನುಷ್ಯ ಸಂಬಂಧಗಳ ನಡುವಿನ ಗಟ್ಟಿ ಹಾಗೂ ಟೊಳ್ಳುತನಗಳು, ಕ್ರೌರ್ಯ ಅಸಮಾನತೆ ಮುಂತಾದ ಭಾವನೆಗಳ ಶೋಧ ಕತೆಗಳಲ್ಲಿ ನಡೆದಿದೆ.

ಜಾಗರೂಕತೆಯ ಅನುಭವ ವಿಸ್ತಾರ ಎನ್ನುವ ನನ್ನ ಪ್ರಬಂಧದ ಅಧ್ಯಾಯದಲ್ಲಿ ಸ್ಥಳೀಕರಣ ಎಂದು ಅರ್ಥೈಸಿಕೊಳ್ಳುತ್ತಾ, ಅವರು ನೋಡಿದ ನೋಡುವ ವಿವರಗಳ ಸೂಕ್ಷ್ಮತೆಯನ್ನು, ಅದನ್ನು ಬಿಡಿಸುವ ತಂತ್ರಗಾರಿಕೆ ಗುರುತಿಸಿದ್ದೇನೆ.

ನಿರೂಪಕರೇ ಕತೆಯನ್ನು ಹೇಳುವ ಧಾಟಿಯಲ್ಲಿ ಬಹಳಷ್ಟು ಕತೆಗಳು ಬಂದಿವೆ. ಈ ತಂತ್ರಗಾರಿಕೆಯಲ್ಲಿ ಬದಲಾವಣೆಗಳಧ್ದಿದ್ದರೆ ಚೆನ್ನಾಗಿತ್ತು. ಅಮುಖ್ಯ ಪಾತ್ರಗಳಿಗೆ ಹೆಸರು ಕೊಟ್ಟು ಮುಖ್ಯ ಪಾತ್ರಗಳಿಗಾಗಲೀ, ಊರುಗಳಿಗಾಗಲೀ ಹೆಸರು ಕೊಡದಿರುವುದು ಹಲವು ಸಾರಿ ಓದುಗರನ್ನು ಗೊಂದಲಕ್ಕೊಡ್ಡಿದೆ.

ಇನ್ನು ಕತೆಗಳ ಬೆಳವಣಿಗೆಯ ವಿಶೇಷ ಎಂಬಲ್ಲಿ ವಸ್ತುವಿನ್ಯಾಸ, ವಸ್ತು ವೈವಿಧ್ಯ, ಜಾಗತೀಕರಣದಿಂದ ಕಂಗೆಟ್ಟು ಹಳ್ಳಿಯ ಸಂಸ್ಕೃತಿ, ಜಾಗತೀಕರಣದಿಂದ ಸಂಸ್ಕೃತಿಯ ಮೇಲಾಗುವ ಪ್ರಭಾವಗಳು, ಸ್ತ್ರೀ ಸಂವೇದನೆ, ಅಮ್ಮನ ಮೇಲೆ ಅವರಿಗಿರುವ ಗೌರವ, ಕನ್ನಡದ ಕಥಾಲೋಕದಲ್ಲಿ ಇದುವರೆಗೂ ಪ್ರಸ್ತಾಪವಾಗದ ಹೆಣ್ಣಿನ ಕತ್ತಲ ಮನಸ್ಸಿನ ತುಮುಲಗಳು, ಹಿಜಡಾಗಳ ಬದುಕು, ಸಲಿಂಗ ಕಾಮ, ವೇಶ್ಯವಾಟಿಕೆ, ಮುಂತಾದವು ಬಹಳ ವಾಸ್ತವ ಚಿತ್ರಣಗಳಾಗಿವೆ. ಕೆಲವು ಕಡೆ ಓದುಗನನ್ನು ಹುಚ್ಚೆಬ್ಬಿಸುವ, ಬೆಚ್ಚಿಸುವ ಲೈಂಗಿಕ ಚಟುವಟಿಕೆಗಳ ವಿವರಗಳು ಬಂದಿರುವುದು ಕಂಡಿದ್ದೇನೆ. ಕನ್ನಡದ ಹೊಸ ಪ್ರಯತ್ನದ ಕತೆಗಳು ಇವು ಎಂಬುದನ್ನು ಗುರುತಿಸುವ ಕೆಲಸ ನನ್ನ ಪ್ರಬಂಧದ ಪ್ರಯತ್ನವಾಗಿದೆ.

# ಅನುಬಂಧ


| | | | |
|---|---|---|---|
| | **ಆಕರ ಗ್ರಂಥಗಳು:** | | |
| 1. | ಅಮ್ಮನ ಆಟೋಗ್ರಾಫ್ | : | ಫಕೀರ (ಶ್ರೀಧರ ಬನವಾಸಿ) ಪಂಚಮಿ ಮೀಡಿಯಾ ಪಬ್ಲಿಕೇಷನ್ಸ್, ಬೆಂಗಳೂರು (2012) |
| | ದೇವರ ಜೋಳಿಗೆ | : | ಫಕೀರ (ಶ್ರೀಧರ ಬನವಾಸಿ) ಪಂಚಮಿ ಮೀಡಿಯಾ ಪಬ್ಲಿಕೇಷನ್ಸ್, ಬೆಂಗಳೂರು (2013) |
| 2. | **ಪರಾಮರ್ಶನ ಗ್ರಂಥಗಳು:**<br>1. ಹೊಸಗನ್ನಡ ಸಾಹಿತ್ಯ ಚರಿತ್ರೆ | : | ಪ್ರೊ.ಎಲ್.ಎಸ್.ಶೇಷಗಿರಿರಾವ್, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು (2013) |
| | 2. ಸಣ್ಣಕಥೆ ಸ್ವರೂಪ ವಿನ್ಯಾಸ | : | ಡಾ॥ ಎಸ್. ಪ್ರಸಾದಸ್ವಾಮಿ, ಕಣ್ವ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು (2011) |
| | 3. ಕನ್ನಡ ಕಥನ ಸಾಹಿತ್ಯ: ಸಣ್ಣಕಥೆ | : | ಆಮೂರ. ಜಿ.ಎಸ್. ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು (2003) |
| | ಯುಗಧರ್ಮ ಹಾಗೂ ಸಾಹಿತ್ಯ ದರ್ಶನ | : | ಕೀರ್ತಿನಾಥ ಕುರ್ತಕೋಟಿ, ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್ ದೇಸಾಯಿ ಕಾಲನಿ, ಯೂನಿವರ್ಸಿಟಿ ಕ್ರಾಸ್, ಧಾರವಾಡ (2008) |
| | ಹೊಸಗನ್ನಡ ಸಾಹಿತ್ಯ ಚರಿತ್ರೆ | : | ಪ್ರೊ.ಎಲ್.ಎಸ್.ಶೇಷಗಿರಿರಾವ್, ಅಂಕಿತ ಪುಸ್ತಕ, ಬೆಂಗಳೂರು (1975) |
| | ಕಥೆ–ಕಥನ | : | ಡಾ॥ ಎಸ್. ಪ್ರಸಾದಸ್ವಾಮಿ ಧಾತ್ರಿ ಪುಸ್ತಕ, ಬೆಂಗಳೂರು (2007) |

